# ಕನ್ನಡ ವಿಶ್ವವಿದ್ಯಾಲಯ,ಹಂಪಿ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಶೋಧನಾ ಪ್ರಬಂಧ

## ಕುವೆಂಪು ಹಾಗೂ ಶಿವರಾಮಕಾರಂತರ ಕಾದಂಬರಿಗಳಲ್ಲಿ ವಸಾಹತುಪ್ರಜ್ಞೆ ಮತ್ತು ಸ್ಥಳೀಯತೆ

## ('ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು', ಮತ್ತು 'ಮರಳಿ ಮಣ್ಣಿಗೆ')

**ಎಂ ಶಿಲ್ಪಿ**

ಸಂಶೋಧನಾ ವಿದ್ಯಾರ್ಥಿ

ನೋಂದಣಿ ಸಂಖ್ಯೆ ; KVMBKS-00543

**ಮಾರ್ಗದರ್ಶಕರು**

**ಡಾ. ಸುರೇಶ ಪಾಟೀಲ**

ಆಚಾರ್ಯ ಪಾಠಶಾಲಾ ಕಲೆಮತ್ತು ವಿಜ್ಞಾನ ಕಾಲೇಜು,

ಕನ್ನಡ ಪ್ರಾಧ್ಯಾಪಕರು ಮತ್ತು ವಿಭಾಗದ ಮುಖ್ಯಸ್ಥರು

ಬೆಂಗಳೂರು.

**ಕಾವ್ಯಮಂಡಲ**

ನಂ.13/ 85,ರಾಷ್ಟ್ರೀಯ ವಿದ್ಯಾಲಯ ರಸ್ತೆ

ಬಸವನಗುಡಿ, ಬೆಂಗಳೂರು – 560 004

2012

# ಪ್ರಮಾಣ ಪತ್ರ

"ಕುವೆಂಪು ಹಾಗೂ ಶಿವರಾಮ ಕಾರಂತರ ಕಾದಂಬರಿಗಳಲ್ಲಿ ವಸಾಹತುಪ್ರಜ್ಞೆ ಮತ್ತು ಸ್ಥಳೀಯತೆ" ('ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು', ಮತ್ತು 'ಮರಳಿ ಮಣ್ಣಿಗೆ') ಎಂಬ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯ ಕಾವ್ಯ ಮಂಡಲದ ವತಿಯಿಂದ ಸಲ್ಲಿಸಲು ಡಾ. ಸುರೇಶ ಪಾಟೀಲರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ವಿಷಯವಾಗಿ ಇದುವರೆಗೂ ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ ; 10-07-2012

ಸ್ಥಳ : ಬೆಂಗಳೂರು

M. Shelvi

ಶೆಲ್ವಿ. ಎಮ್

ಸಂಶೋಧನ ವಿಧ್ಯಾರ್ಥಿ

ಬೆಂಗಳೂರು.

# ದೃಢೀಕರಣ ಪತ್ರ

ಶೆಲ್ವಿಎಮ್ ಅವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿದ "ಕುವೆಂಪು ಹಾಗೂ ಶಿವರಾಮ ಕಾರಂತರ ಕಾದಂಬರಿಗಳಲ್ಲಿ ವಸಾಹತುಪ್ರಜ್ಞೆ ಮತ್ತು ಸ್ಥಳೀಯತೆ" ('ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು', ಮತ್ತು 'ಮರಳಿ ಮಣ್ಣಿಗೆ') ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ ; 10-07-2012

ಸ್ಥಳ ; ಬೆಂಗಳೂರು

ಮಾರ್ಗದರ್ಶಕರು

ಡಾ. ಸುರೇಶ ಪಾಟೀಲ

ಆಚಾರ್ಯ ಪಾಠಶಾಲೆ ಕಲೆ ಮತ್ತು ವಿಜ್ಞಾನ ಕಾಲೇಜು,

ಕನ್ನಡ ಪ್ರಾಧ್ಯಾಪಕರು ಮತ್ತು ವಿಭಾಗದ ಮುಖ್ಯಸ್ಥರು,

ಬೆಂಗಳೂರು.

# ಪರಿವಿಡಿ

# ಅಧ್ಯಾಯ – 1

## ಕುವೆಂಪು ಹಾಗೂ ಕಾರಂತರ ಕಾದಂಬರಿಗಳಲ್ಲಿ ವಸಾಹತುಪ್ರಜ್ಞೆ ಹಾಗೂ ಸ್ಥಳೀಯತೆ

## ಅಧ್ಯಯನದ ಉದ್ದೇಶ, ಸ್ವರೂಪ ಹಾಗೂ ವ್ಯಾಪ್ತಿ

ವಸಾಹತುಪ್ರಜ್ಞೆ ಎಂಬುದು ಪಶ್ಚಿಮದ ಮುಖೇನ ಬಂದು ಒಂದು ರೀತಿ ಇಲ್ಲಿನ ಜನರ ಆಲೋಚನೆಯನ್ನು ರೂಪಿಸಿ, ತನ್ಮೂಲಕ ಸಮಾಜದ ಮೇಲೆ ತನ್ನದೇ ಆದಂತಹ ಪರಿಣಾಮವನ್ನು ಬೀರುತ್ತಾ ಸ್ಥಳೀಯ ಜನರನ್ನು, ಅವರ ಜೀವನ ಕ್ರಮವನ್ನು, ರೀತಿ-ನೀತಿಗಳನ್ನು, ಬದಲಾವಣೆಗೊಳಿಸುವ ಮುಖಾಂತರ ಯಾವರೀತಿ ನಮ್ಮ ಸಾಂಸ್ಕೃತಿಕ ಸಾಮಾಜಿಕ ಮತ್ತು ಆಡಳಿತದ ವ್ಯವಸ್ಥೆಯನ್ನು ರೂಪಿಸಿತು ಎಂಬುದನ್ನು ಗುರ್ತಿಸುವುದೇ ಈ ಅಧ್ಯಯನದ ಉದ್ದೇಶವಾಗಿರುತ್ತದೆ. ಈ ಅಧ್ಯಯನಕ್ಕೆ ಸಾಂಸ್ಕೃತಿಕ ದಾಖಲೆಯಾಗಿ ಕುವೆಂಪು ಮತ್ತು ಕಾರಂತರ ಕಾದಂಬರಿಗಳನ್ನು ಆರಿಸಿಕೊಳ್ಳಲಾಗಿದೆ.

ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಒಂದು ನೆಲೆಯಲ್ಲಿ ವಸಾಹತುಶಾಹಿಯ ಸ್ವೀಕರಣೆ, ಇನ್ನೊಂದು ನೆಲೆಯಲ್ಲಿ ಅದರ ವಿರುದ್ಧ ತಮ್ಮ ಪ್ರತಿಭಟನೆ ಕಂಡು ಬರುತ್ತದೆ. ಈ ದ್ವಂದ್ವ ಆ ಕಾಲಘಟ್ಟದ ಅನಿವಾರ್ಯತೆಯೂ ಹೌದು. ಈ ಸಂದರ್ಭದಲ್ಲಿ ಒಬ್ಬ ಲೇಖಕ ಪ್ರಮುಖವಾಗಿ ಹೇಗೆ ತನ್ನ ಕಾದಂಬರಿಗಳಲ್ಲಿ ಸಮಾಜ ಮತ್ತು ಜನರ ಜೀವನ ಕ್ರಮಗಳ ವಿವರಣೆಯನ್ನು ನೀಡುವ ಮೂಲಕ, ಅಂದಿನ ಸಮಾಜದಲ್ಲಿ ಜನರು ತಮ್ಮನ್ನು ತಾವು ಹೇಗೆ ವಸಾಹತುಪ್ರಜ್ಞೆಗೆ ಒಳಪಡಿಸಿಕೊಂಡರು ಮತ್ತು ಜೊತೆಜೊತೆಗೆ ತಮ್ಮದೆ ಆದಂತಹ ಸ್ಥಳೀಯತೆಯ ಪ್ರಜ್ಞೆ, ಪರಂಪರೆಗಳನ್ನು ಇಟ್ಟುಕೊಂಡು ಅದರಲ್ಲಿ ಬದಲಾವಣೆಗಳನ್ನು ತಂದುಕೊಂಡರು ಎಂಬುದನ್ನು ಪ್ರಮುಖವಾಗಿ ಕುವೆಂಪುರವರ 'ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು' ಹಾಗೂ ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಗಳ ಮೂಲಕ ಚರ್ಚಿಸಲಾಗಿದೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನದ ಆಶಯವೆಂದರೆ.

1. ಕನ್ನಡ ಸಂಸ್ಕೃತಿಯೊಂದರ ಅಸ್ತಿತ್ವವನ್ನು ಕನ್ನಡ ಕಾದಂಬರಿಗಳಲ್ಲಿ ನೋಡುವುದು. ವಸಾಹತುಶಾಹಿ ಎಂಬುದು ಮೂಲತಃ ಅಧಿಕಾರ ವರ್ಗ ಮತ್ತು ಅಧಿಕಾರತ್ವದ ಪರಿಪಾಲನೆಯನ್ನು ಮಾಡುವ ವರ್ಗವೇ ಆಗಿರುತ್ತದೆ.

2. ಈ ಕಾದಂಬರಿಗಳಲ್ಲಿ ಸ್ಥಳೀಯ ಜನರ ಜೀವನದ ಕ್ರಮವು ನಿಧಾನವಾಗಿ ವಸಾಹತುಶಾಹಿಯಪ್ರಜ್ಞೆಗೆ ತೆರೆದುಕೊಂಡು ತಮ್ಮ ಜೀವನವನ್ನು ಸಾಗಿಸುವಂತಹ ವಿಧಾನವನ್ನು ಕುವೆಂಪುರವರ 'ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು' ಹಾಗೂ ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಗಳಲ್ಲಿ ಕಂಡು ಬಂದಿರುವುದನ್ನು ವೀಕ್ಷಿಸಬಹುದಾಗಿದೆ. ಅಂದರೆ ಎಷ್ಟೇ ಪಾಶ್ಚಾತ್ಯರ ಪ್ರಭಾವವು ನಮ್ಮ ಮೇಲೆ ಬಿದ್ದರೂ ಸಹ ನಮ್ಮ ಕನ್ನಡವು ಅದನ್ನು ಪರಂಪರೆಯ ಮೂಲಕವೇ ವಿಭಿನ್ನವಾಗಿ ಗ್ರಹಿಸುವಂತಹುದು ಮುಖ್ಯವಾಗುತ್ತದೆ. ಅಂದರೆ ಇಲ್ಲಿ ಕಾದಂಬರಿಕಾರರು ತಮ್ಮ ಸ್ಥಳೀಯತೆ ಅಥವಾ ಪ್ರಾದೇಶಿಕತೆಗೆ ಎಷ್ಟು ಮಹತ್ವವನ್ನು ನೀಡಿರುತ್ತಾರೆ ಎಂಬುದು ಅಧ್ಯಯನದ ವಿಷಯ ವ್ಯಾಪ್ತಿಯ ಸಂಗತಿಯಾಗಿದೆ.

3. ವಸಾಹತುಶಾಹಿಯು ಹೇಗೆ ಒಂದು ಸಮಾಜದಲ್ಲಿ ಒಡಮೂಡಿ ಬರುವಂತಹ ವಿಚಾರಧಾರೆ, ರೀತಿ–ನೀತಿ ಮತ್ತು ಜನರ ಬದುಕಿನ ಕ್ರಮವನ್ನು ನಿರ್ಧರಿಸುತ್ತದೆ ಎಂಬುದು ಇಲ್ಲಿ ಮುಖ್ಯವಾದ ಗ್ರಹಿಕೆಯಾಗಿರುತ್ತದೆ. ಹಾಗೂ ಹೇಗೆ ಪ್ರತಿಯೊಂದು ಸಮಾಜದ ಜನಸಮುದಾಯವೂ ತನ್ನದೇ ಆದಂತಹ ದೇಸಿ ಪರಂಪರೆಯಲ್ಲಿದ್ದೂ ವಸಾಹತುಶಾಹಿಯ ಅರಿವಿನಿಂದಾಗಿ ತನ್ನ 'ತನ' ವನ್ನು ಮರೆಯುವ ಪ್ರಯತ್ನವನ್ನು ಮಾಡುತ್ತದೆ. ಹಾಗೂ ಹೇಗೆ ತಮ್ಮನ್ನು ಪಾಶ್ಚಾತ್ಯರ ಮೋಹಕ್ಕೆ ಒಗ್ಗಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತದೆ. ಸ್ಥಳೀಯತೆ ಯಾವುದನ್ನು ಬೇಡವೆಂದು ನಿರಾಕರಿಸುತ್ತದೆಯೋ ಅದನ್ನು ನಂತರ ಸ್ವೀಕರಿಸುವುದರ ಮೂಲಕ ತನ್ನ ಜೀವನದ ಕ್ರಮವನ್ನು ತನ್ನ ಪರಂಪರೆಯಿಂದ ಹೇಗೆ ಭಿನ್ನವಾಗಿ ರೂಪಿಸಿಕೊಳ್ಳುತ್ತಾ ಹೋಗುತ್ತದೆ. ಇವೇ ಮೊದಲಾದ ಸಂಗತಿಗಳನ್ನು ನಾವು 'ಕಾನೂರು ಹೆಗ್ಗಡಿತಿಯ', ಹೂವಯ್ಯ 'ಮಲೆಗಳಲ್ಲಿ ಮದುಮಗಳು' ಕೃತಿಯಲ್ಲಿ ಬರುವ ಪಾದ್ರಿ ಜೀವರತ್ನಯ್ಯ ಹಾಗೂ ದೇವಯ್ಯ ಗೌಡ ಹಾಗೂ 'ಮರಳಿ ಮಣ್ಣಿಗೆ'ಯ ನಾಗವೇಣಿಯು ವರ್ತಮಾನವನ್ನು ನೋಡುವ ಕ್ರಮದಲ್ಲಿಯೇ ಭಿನ್ನಳಾಗಿದ್ದಾಳೆ ಎಂಬುದನ್ನು ಆಯಾ ಕಾದಂಬರಿಗಳಲ್ಲಿ ನೋಡಬಹುದು.

4. ಕುವೆಂಪುರವರ 'ಕಾನೂರು ಹೆಗ್ಗಡಿತಿ' ಹಾಗೂ ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಸ್ವಾತಂತ್ರ್ಯೋತ್ತರ ಕಾದಂಬರಿಗಳಾಗಿದ್ದು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯೂ ಸ್ವಾತಂತ್ರ್ಯ ಪೂರ್ವದ ಕಥಾ ಸ್ವರೂಪವನ್ನು ಒಳಗೊಂಡಿರುತ್ತದೆ. ಮುಖ್ಯವಾಗಿ ಇಲ್ಲಿ

ನಿರೂಪಿತವಾದ ಭೌಗೋಳಿಕ ವಿವರ, ಬದುಕಿನ ಕ್ರಮ, ಮದುವೆ, ಆಹಾರ ಪದ್ಧತಿ ಮುಂತಾದವುಗಳ ಮೂಲಕ ಕಾಲಮಾನಕ್ಕೆ ತಕ್ಕಂತೆ ವಸಾಹತುಶಾಹಿಯ ಪ್ರಭಾವವೂ ಹೇಗೆ ಸ್ಥಳೀಯತೆಯ ಮೇಲೆ ಬೀರುತ್ತದೆ ಎಂಬುದನ್ನು ಗುರುತಿಸಬಹುದಾಗಿದೆ. ಕುವೆಂಪುರವರ, 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಮತ್ತು ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಗಳಲ್ಲಿ ವಸಾಹತುಶಾಹಿಯಪ್ರಜ್ಞೆ ಮತ್ತು ಸ್ಥಳೀಯತೆಗೆ ಸಂಬಂಧಿಸಿದಂತಹ,

- ಆಹಾರ ಪದ್ಧತಿ, ಜೀವನ ಕ್ರಮ, ಭೌಗೋಳಿಕ ವಿವರ
- ಸಮಾಜ ಶಾಸ್ತ್ರಿಯ ದೃಷ್ಟಿಕೋನ
- ಧರ್ಮ,ಜಾತಿ

ಇವುಗಳನ್ನು ವಿಭಿನ್ನ ಕಾಲಘಟ್ಟದ ಪರಿಸರದಲ್ಲಿ ಇಟ್ಟು ನೋಡುವುದು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ.

ಒಟ್ಟಿನಲ್ಲಿ ಪಶ್ಚಿಮವು ರೂಪಿಸಿಕೊಂಡ ಸಂಕಥನದ ಮೂಲಕ ಭಾರತೀಯರನ್ನು ಅರ್ಥೈಸಿಕೊಂಡ ಪಶ್ಚಿಮ ಆಕ್ರಮಣಕಾರಿ ಧೋರಣೆಯು ಭಾರತೀಯ ವಿಚಾರಧಾರೆಯ ಮೇಲೆ ಪ್ರಭಾವ ಬೀರಿತು. ಈ ಮೂಲಕ ವಸಾಹತು ಪ್ರಜ್ಞೆ ಭಾರತೀಯರನ್ನು ಆಳದೆ ಬಿಡಲಿಲ್ಲ ಸ್ಥಳಿಯತೆಯನ್ನು ಹಾಗೂ ದೇಸೀ ಪ್ರಜ್ಞೆಯನ್ನು ಕೂಡ ಸಂಪೂರ್ಣವಾಗಿ ಅನುಮಾನದ ದೃಷ್ಟಿಯಿಂದ ನೋಡುವ ಹಾಗೆ ಅದು ಪ್ರೇರೇಪಿಸಿತು. ಹೀಗಾಗಿ ಇಲ್ಲಿ ಭಾರತೀಯನೆಂದರೆ ಪಶ್ಚಿಮದ ಮನಸ್ಥಿತಿ ಹೊಂದಿರುವ ಭಾರತೀಯನಾಗಿ ಕಾಣಿಸಿಕೊಳ್ಳುತ್ತಾನೆ. ಈ ರೀತಿಯಾಗಿ ವಸಾಹತುಪ್ರಜ್ಞೆ ಭಾರತೀಯನ ಮೂರ್ತ–ಅಮೂರ್ತ, ಮಾನಸಿಕ ಹಾಗೂ ದೈಹಿಕ ಎಲ್ಲದರ ಮೇಲೂ ಆಕ್ರಮಣ ಮಾಡುವುದರ ಮೂಲಕವೇ ಭಾರತೀಯನನ್ನು ಪಶ್ಚಿಮದ ಪ್ರಜ್ಞೆಯ ಅಧೀನತೆಗೆ ಒಳಪಡಿಸಿತು. ಈ ರೀತಿಯಾಗಿ ವಸಾಹತುಪ್ರಜ್ಞೆ ಇಡೀ ಭಾರತವನ್ನು ಆವರಿಸುವುದರ ಮೂಲಕ ಪ್ರತಿಯೊಬ್ಬ ಕನ್ನಡಿಗನ ಮನದಲ್ಲಿಯೂ ನೆಲೆ ಕಂಡಿತು. ಹೀಗಾಗೀಯೇ ಕನ್ನಡ ತನವು ಇಡೀ ಕನ್ನಡಿಗನ ಮೂಲಕ ಪ್ರಸ್ತುತ ಅಧ್ಯಯನವನ್ನು ನಡೆಸಲು ಉದ್ದೇಶಿಸಲಾಗಿದೆ.

## ಅಧ್ಯಾಯ – 2

## ಕಾದಂಬರಿಗಳಲ್ಲಿ ಒಡಮೂಡಿರುವಂತಹ ವಸಾಹತುಶಾಹಿಪ್ರಜ್ಞೆಯ ಚಿಂತನೆಗಳು

ವಸಾಹತುಶಾಹಿಯ ಪ್ರಮುಖವಾದ ಗುರಿ-ಉದ್ದೇಶವೆಂದರೆ, ದೇಶೀಯ ಸಂಸ್ಕೃತಿಗಳಲ್ಲಿ ಅಂತರ್ಗತವಾದ ಬಹುಮುಖತ್ವವನ್ನು ಧಮನಗೊಳಿಸುವುದು ಮತ್ತು ಅವುಗಳ ಅನನ್ಯತೆಯನ್ನು ಬುಡಮೇಲು ಮಾಡುವ ಮೂಲಕ ಅವುಗಳನ್ನು ಸಾಂಸ್ಕೃತಿಕ ವಸಾಹತುಗಳನ್ನಾಗಿ ಬದಲಾವಣೆ ಮಾಡುವಂತಹುದು ಎಂಬುದಾಗಿ ಗುರ್ತಿಸಬಹುದಾಗಿದೆ.

ಕುವೆಂಪು ಮತ್ತು ಶಿವರಾಮ ಕಾರಂತರು ಕನ್ನಡ ಸಾಹಿತ್ಯದ ಶ್ರೇಷ್ಠ ಕಾದಂಬರಿಕಾರರು. ಇವರು ಕನ್ನಡ ಸಾಹಿತ್ಯದಲ್ಲಿ ಕಾದಂಬರಿಗಳ ಮೂಲಕ ಹೊಸ ಸಾಧ್ಯತೆಗಳನ್ನು ತೆರೆದಿಟ್ಟು, ಸಾಂಪ್ರದಾಯಿಕ ವಿಚಾರಗಳಿಗೆ ವೈಜ್ಞಾನಿಕ ವಿಚಾರಧಾರೆಗಳನ್ನು, ಮುಖಾಮುಖಿ ಮಾಡುವ ಮೂಲಕ ಹೊಸ ಅನ್ವೇಷಣೆಗೆ ತಮ್ಮನ್ನು ಒಗ್ಗಿಸಿಕೊಂಡಿರುವುದು ಮಹತ್ವದ ಸಂಗತಿಯಾಗಿದೆ. ಶಿವರಾಮ ಕಾರಂತರು ಕಾದಂಬರಿಯಲ್ಲದೆ ಇತರ ಕಾರ್ಯಕ್ಷೇತ್ರದ ಮೂಲಕ ತಮ್ಮ ಬಹುಮುಖ ವ್ಯಕ್ತಿತ್ವವನ್ನು ಗುರ್ತಿಸಿಕೊಂಡವರು.

ನಮ್ಮನ್ನು ಆಳುವುದಕ್ಕೆ ಬಂದ ಅನ್ಯರು ನಮ್ಮ ದೇಶವನ್ನು ತಮ್ಮ ನೆಲಸುನಾಡಾಗಿ ಮಾಡಿಕೊಂಡರು. ನಮ್ಮನ್ನು ನಿಯಂತ್ರಿಸಲು ತಮ್ಮದೆ ಭೌತಿಕ-ಬೌದ್ಧಿಕ ತಾಂತ್ರಿಕ ಕ್ರಮ ಅಳವಡಿಸಿದರು. ಈ ನೆಲೆಯಿಂದ ವಸಾಹತುಶಾಹಿ ಎಂದರೆ ನೂತನವಾಗಿ ಬಂದಂತಹ ಆಲೋಚನಾ ಕ್ರಮ, ಕೆಲವೊಂದು ಹೊರ ಮತ್ತು ಕನ್ನಡ ಪರಂಪರೆಯ ಒಳಗಿನ ಆಲೋಚನೆಗಳಲ್ಲಿ ಏರ್ಪಡುವಂತಹ ಮಾರ್ಪಾಟು ಎಂಬುದಾಗಿ ಗ್ರಹಿಸಬಹುದಾಗಿದೆ. ಅಂದರೆ ಈ ಮೂಲಕ ಯಾವುದೇ ರೀತಿಯ ದಬ್ಬಾಳಿಕೆ, ಶೋಷಕ ಸ್ಥಿತಿಯನ್ನು ವಸಾಹತುಶಾಹಿ ಸಂಸ್ಕೃತಿ ಎಂಬುವುದಾಗಿ ಸ್ಥೂಲವಾಗಿ ಗ್ರಹಿಸಬಹುದಾಗಿದೆ. ರಾಷ್ಟ್ರ-ರಾಷ್ಟ್ರಗಳ, ವರ್ಣ-ವರ್ಗಗಳ, ಶ್ರೀಮಂತ-ಬಡವ, ಬ್ರಾಹ್ಮಣ-ಶೂದ್ರ ಮತ್ತು ಗಂಡು-ಹೆಣ್ಣುಗಳ ನಡುವಿನ ತಾರತಮ್ಯ ಮತ್ತು ಎಲ್ಲಾ ಮಟ್ಟಗಳಲ್ಲಿ ಮೇಲು-ಕೀಳು ಯಜಮಾನಿಕೆಯ ಪ್ರಜ್ಞೆಯಲ್ಲಿ ಈ ವಸಾಹತುಶಾಹಿ ಇರುವುದನ್ನು ತಿಳಿಯಬಹುದಾಗಿದೆ.

ಒಟ್ಟಾರೆ ನಮ್ಮ ಪರಂಪರೆ ಹಾಗೂ ವಸಾಹತುಶಾಹಿ ಪ್ರಭಾವ ಇವೆರಡರ ಸಂಬಂಧಗಳು ಪ್ರಾರಂಭದಲ್ಲಿ ಒಂದುಗೂಡುವುದಕ್ಕೆ ಸಾಧ್ಯವಾಗದೇ ಹೋಗುವುದನ್ನು ಕೂಡ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡಿತಿ' ಮತ್ತು ಶಿವರಾಮಕಾರಂತರ 'ಮರಳಿಮಣ್ಣಿಗೆ' ಈ ಮೂರು ಕಾದಂಬರಿಗಳು ಪ್ರಸ್ತುತಪಡಿಸುತ್ತದೆ. ಮೊದಲಿಗೆ ಹೊಸದಾಗಿ ಬಂದು ಸೇರ್ಪಡೆಯಾದಂತಹ ಪರಕೀಯ ಸಂಸ್ಕೃತಿಯನ್ನು ಕಡೆಗಣಿಸಿದರೂ, ಕ್ರಮೇಣ ಅದರ ಪ್ರಭಾವೂ ಒಂದು ನೂತನ ವಾತಾವರಣವನ್ನೇ ಸೃಷ್ಟಿಸುವ ಮೂಲಕ ಹೊಸ-ಹೊಸ ವಿಚಾರಗಳು ನಮ್ಮನ್ನು ಹೇಗೆ ಆವರಿಸುತ್ತವೆ ಎಂಬುದನ್ನು ಗಮನಿಸಬಹುದು. ಸಂಘರ್ಷದ ನಂತರದ ಹೊಂದಾಣಿಕೆ ಇಲ್ಲಿ ಕಂಡು ಬರುತ್ತದೆ. ಸಮನ್ವಯ ಸಂದರ್ಭದಲ್ಲಿ ಪರಂಪರೆಯಲ್ಲಿ ಅಂತೆ ಆಧುನೀಕತೆ ಎರಡರಲ್ಲೂ ಯಾವುದು ಸ್ವೀಕಾರಾರ್ಹ ಮತ್ತು ಯಾವುದು ತ್ಯಾಜ್ಯ ಎನ್ನುವುದನ್ನು ಈ ಲೇಖಕರ ವಸಾಹತುಶಾಹಿ ಕುರಿತ ಧೋರಣೆ ನಿರ್ಧರಿಸುತ್ತದೆ. 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಈ ಎರಡೂ ಕಾದಂಬರಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಎರಡೂ ಕಾದಂಬರಿಗಳ ಧೋರಣೆಗಳಲ್ಲಿರುವ ಸೂಕ್ಷ್ಮ ವ್ಯತ್ಯಾಸವೂ ನಮಗೆ ಸ್ಪಷ್ಟವಾಗಿ ತಿಳಿದು ಬರುತ್ತದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ವಸಾಹತುಶಾಹಿಪ್ರಜ್ಞೆಯನ್ನು ಆ ಪರಿಸರವು ನಿಧಾನವಾಗಿ ಒಗ್ಗಿಸಿಕೊಳ್ಳುವುದನ್ನು ನಾವು ಗ್ರಹಿಸಬಹುದು. ಆದರೆ 'ಕಾನೂರು ಹೆಗ್ಗಡತಿ' ಕಾದಂಬರಿಯೂ ವಸಾಹತುಪ್ರಜ್ಞೆಯನ್ನು ಸಂಪೂರ್ಣವಾಗಿ ಪ್ರಶ್ನಿಸುತ್ತದೆ. ಶಿವರಾಮಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ಬೆಳವಣಿಗೆಯಲ್ಲಿ ವಸಾಹತುಪ್ರಜ್ಞೆ ನಿಧಾನವಾಗಿ ಆ ಪರಿಸರದ ಮೇಲೆ ಯಾವ ಪರಿಣಾಮವನ್ನು ಬೀರುತ್ತಿದೆ ಎಂಬುದನ್ನು ಗುರ್ತಿಸಲಾಗಿದೆ.

ಕುವೆಂಪುರವರು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯನ್ನು ಬರೆಯಲು ಪ್ರಾರಂಭಿಸಿದ ಕಾಲಕ್ಕೆ ಭಾರತ ದೇಶವು ಸಂಪೂರ್ಣವಾಗಿ ಬ್ರಿಟೀಷರ ಆಳ್ವಿಕೆಯಲ್ಲಿತ್ತು. ಅಂತಹ ಸಂದರ್ಭದಲ್ಲಿ ವಸಾಹತುಶಾಹಿ ಸಂಸ್ಕೃತಿಗೆ ಸಂಪೂರ್ಣವಾಗಿ ದೇಶವು ಅಧೀನವಾಗುವುದನ್ನು ಕುವೆಂಪುರವರು ಕ್ರೈಸ್ತ ಧರ್ಮದ ಪ್ರಚಾರವನ್ನು ಮಾಡುವ ಪಾದ್ರಿ ಜೀವರತ್ನಯ್ಯನ ಮೂಲಕ ಸಾಂಕೇತಿಕವಾಗಿ ನಿರೂಪಿಸುತ್ತಾರೆ. ಆತ ಸ್ಥಳೀಯ ಜನರಾದ ಬೆಟ್ಟಳ್ಳಿ ಕಲ್ಲಯ್ಯಗೌಡರ ಹಿರಿಯ ಮಗ ದೇವಯ್ಯಗೌಡ ಮತ್ತು ಕಿಲಸ್ತರ ಜಾತಿಗೆ ಸೇರುವ ಬಚ್ಚ ಇವರನ್ನು ಮತಾಂತರ ಮಾಡಿಸುವ ಸಲುವಾಗಿ ನಡೆಸುವ ಪ್ರಯತ್ನ ಈ ದೃಷ್ಟಿಯಿಂದ ವಿಶೇಷ ವಿಶ್ಲೇಣೆಗೆ ಯೋಗ್ಯವಾಗಿದೆ. ಸ್ಥಳೀಯ ಸಮುದಾಯದವರಿಗೆ ಅಪರಿಚಿತವಾದ ವಸ್ತುವನ್ನು ಪರಿಚಯಗೊಳಿಸುವುದರ ಮೂಲಕ ಜನರನ್ನು ತನ್ನ ಕಡೆಗೆ ಸೆಳೆಯಲು ಬೈಸಿಕಲ್ಲು (ಬೀಸೆಕಲ್ಲಿನ) ಪರಿಚಯವನ್ನು ಪಾದ್ರಿ

ಮೂಡಿಸುತ್ತಾನೆ. ಬೀಸೆಕಲ್ಲಿನ ಸವಾರಿಯನ್ನು ದೇವಯ್ಯಗೌಡರಿಗೆ ಕಲಿಸುವಂತಹ ಸಂದರ್ಭದಲ್ಲಿ ಹೂವಳ್ಳಿಯ ಕಿಲಸ್ತರ ಜಾತಿಗೆ ಸೇರಿದ ದೊಡ್ಡಬೀರ ಮತ್ತು ಲಚ್ಚ ಇವರು ಸಹಾಯಕರಾಗಿರುತ್ತಾರೆ. ಒಮ್ಮೆ ದೊಡ್ಡಬೀರ ಕಾಲು ಎಡವಿ ಬೀಳುವಂತಹ ಸಂದರ್ಭದಲ್ಲಿ ದೇವಯ್ಯಗೌಡ ಆತನಿಗೆ ಶ್ರೂಶುಷೆ ಮಾಡಲು ಬಂದಾಗ ಪಾದ್ರಿಯೂ ತನ್ನ ವೇಷಭೂಷಣ ಹಾಗೂ ಪ್ರೈಯರ್ ಮುಖೇನ ಅಲ್ಲಿಯ ಜನರನ್ನು ತನ್ನ ಕಡೆಗೆ ಆಕರ್ಷಿಸಿಕೊಳ್ಳುವ ಸಲುವಾಗಿ, ದೇವರು ಸೃಷ್ಟಿಸಿದ ಈ ಲೋಕ ಎಂಬ ಕೆಲವೊಂದು ಅಂಶಗಳನ್ನು ಆ ಸಂದರ್ಭದಲ್ಲಿ ಹೇಳುವ ಮುಖಾಂತರ ಕ್ರೈಸ್ತ ಧರ್ಮಕ್ಕೆ ಅಲ್ಲಿಯವರನ್ನು ಸೆಳೆಯುವ ಪ್ರಯತ್ನವನ್ನು ಮಾಡುತ್ತಾನೆ. ಮತ್ತೊಂದು ಅಂಶವೆಂದರೆ ಬೈಸಿಕಲ್ಲನ್ನು ತಮ್ಮ ಪರಿಚಯ ಭಾಷೆಯಾದ ಬೈಸಿಕಲ್ಲಾಗಿ ಸಮುದಾಯದವರು ಗ್ರಹಿಸುತ್ತಾರೆ. ಇಲ್ಲಿ ಮುಖ್ಯವಾಗಿ ನಾವು ವಸಾಹತುಶಾಹಿಯಪ್ರಜ್ಞೆ ಬೈಸಿಕಲ್ಲಾಗಿ ಸ್ಥಳೀಯರಿಗೆ ಪರಿಚಯವಾಗಿರುವುದನ್ನು ಗಮನಿಸಬಹುದಾಗಿದೆ. ಇದು ಮೇಲ್ನೋಟಕ್ಕೆ ಅತ್ಯಂತ ಸಾಮಾನ್ಯ ಸಂಗತಿ ಎನ್ನಿಸಬಹುದಾದರೂ ಈ ಕೃತಿಗೆ ಅರ್ಥಪೂರ್ಣ ಧ್ವನಿಯಾಗುತ್ತದೆ.

ಕನ್ನಡ ಸಾಹಿತ್ಯವು ಹಳೆಯ ಪರಂಪರೆಯಲ್ಲಿ ಮತಧರ್ಮ ಪ್ರಭುತ್ವದೊಂದಿಗೆ ನಡೆಸಿದ ಸಂಘರ್ಷಕ್ಕಿಂತ ವಸಾಹತುಶಾಹಿಯೊಂದಿಗೆ ನಡೆಸಿದ ಸಂಘರ್ಷವು ತುಂಬಾ ಭಿನ್ನವಾಗಿ ಮತ್ತು ಮಹತ್ವದಾಗಿದೆ, ಎಂಬ ಅಂಶವನ್ನೂ ನಾವು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮೂಲಕ ಗ್ರಹಿಸಬಹುದಾಗಿದೆ.

ಕುವೆಂಪುರವರು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮೇಗರವಳ್ಳಿಯಲ್ಲಿ ಒಂದು ಎತ್ತರವಾದ ದಿಬ್ಬದ ಮೇಲೆ ಮಿಶಿನ್ ಇಸ್ಕೂಲ್ ಕಟ್ಟಡ ತಯಾರಾಗುತ್ತಿತ್ತು ಎಂಬುದನ್ನು ಹೇಳುವ ಮುಖಾಂತರ, ನಮ್ಮ ಹಳೆಯ ವಿಧ್ಯಾಭ್ಯಾಸ ಪದ್ಧತಿಯು ನಿಂತು ನಿಧಾನವಾಗಿ ಬ್ರಿಟೀಷರ (ಆಂಗ್ಲರ) ವಿದ್ಯಾಭ್ಯಾಸ ಪ್ರಚಲಿತಗೊಳ್ಳವುದರ ಜೊತೆಗೆ ಸ್ಥಳೀಯರ ಮೇಲೆ ಅದು ಹೇಗೆ ಪರಿಣಾಮವನ್ನು ಬೀರತೊಡಗಿತು ಎಂಬುದನ್ನೂ ಸೂಚಿಸುತ್ತಾರೆ. ಇದು ಸ್ಪಷ್ಟವಾಗಿ ವಸಾಹತುವಿನ ಪ್ರಭಾವವೇ ಆಗಿದೆ. ಅಂದರೆ ಮಲೆನಾಡಿನ ಜನರ ಜೀವನದಲ್ಲಿ ಹಳೆಯ ವಿದ್ಯಾಭ್ಯಾಸ ಪದ್ಧತಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ, ಒಂದು ಹೊಸ ಬಗೆಯ ಶಿಕ್ಷಣದ ಕ್ರಮವನ್ನು ಆವರಿಸಿಕೊಂಡಿತ್ತು ಎಂಬುದು ಗಮನಾರ್ಹವಾದ ವಿಷಯವಾಗಿದೆ. ಏಕೆಂದರೆ ಎಲ್ಲಿ ಆಧುನಿಕತೆಯ – ಬದಲಾವಣೆ ಎಂಬುದು ಬೆಳವಣಿಗೆಯ ಶಿಕ್ಷಣವಾಗಿದೆ.

ಮಲೆನಾಡಿನಲ್ಲಿ ವಾಸವಾಗಿರುವ ಸಮುದಾಯಕ್ಕೆ ಪಾದ್ರಿಯೂ ಕಾವೇರಿಯ ತಾಯಿಯಾದ ಅಂತಕ್ಕನ ಮೂಲಕ ಪ್ರಪ್ರಥಮವಾಗಿ ಕಾಫಿಯ ಪರಿಚಯವನ್ನು ಮಾಡಿಸುತ್ತಾಳೆ. ಮೊದಮೊದಲಿಗೆ ಸುಬ್ಬಣ್ಣ ಹೆಗ್ಗಡೆ ಹಾಗೂ ಅದೇ ವರ್ಗದವರು ಅದನ್ನು ವಿರೋಧಿಸಿದರೂ, ನಿಧಾನವಾಗಿ ವಸಾಹತುವಿನಪ್ರಜ್ಞೆಯೂ ಜನರನ್ನು ತನ್ನೆಡೆಗೆ ಆಕರ್ಷಿಸಿತು ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಹಾಗೆಯೆ ಬೆಂಕಿಪೊಟ್ಟಣದ ಅರಿವು ಮೊದಲಿಗೆ ಅಪರಿಚಿತವಾದದ್ದು ನಿಧಾನವಾಗಿ ಪರಿಚಯವಾಗುವುದರ ಕಡೆಗೆ ಸಾಗುವುದು ಎಲ್ಲರ ಗಮನಾರ್ಹವಾದುದಾಗಿದೆ.

ತಮ್ಮ ಗೊಡ್ಡು ಸಂಪ್ರದಾಯಗಳಿಗೆ ಒಗ್ಗಿಕೊಂಡ ಮಲೆನಾಡಿನ ಜನ ಕ್ರಮೇಣ ಒಂದು ಕಾನೂನಿನ ವ್ಯವಸ್ಥೆ, ವೈದ್ಯಕೀಯ ವ್ಯವಸ್ಥೆಗೆ ತೆರೆದುಕೊಂಡವರು. ಆ ವ್ಯವಸ್ಥೆಯ ಒಂದು ಭಾಗವಾಗುತ್ತಾರೆ ಎಂಬುದನ್ನು ಗಮನಿಸಬಹುದಾಗಿದೆ. ಅಂದರೆ ಹೀಗಾಗಲೇ ನಿರ್ಧರಿಸಿದಂತಹ ಪ್ರಜ್ಞೆಯೂ ನಿಧಾನವಾಗಿ ಒಂದು ಗಡಿಯನ್ನು ದಾಟಿ ಒಂದು ಹೊಸ ಬಗೆಯ ವಿಚಾರಗಳನ್ನು ಗ್ರಹಿಸಲು ಯತ್ನಿಸುತ್ತಿದೆ ಎಂಬುದನ್ನು ನಾವಿಲ್ಲಿ ಅರಿಯಬಹುದಾಗಿದೆ.

'ಕಾನೂರು ಹೆಗ್ಗಡತಿ' ಕಾದಂಬರಿಯು ಸ್ವಾತಂತ್ರ್ಯೋತ್ತರ ಕಾದಂಬರಿಯಾಗಿರುವ ಕಾರಣ ಇಲ್ಲಿ ಮುಖ್ಯವಾಗಿ ವಸಾಹತುಶಾಹಿ ಹಾಗೂ ಸ್ಥಳೀಯ ಸಂಸ್ಕೃತಿಗಳ ಸಂಘರ್ಷವನ್ನು ನೋಡಬಹುದು. ಕಾನೂರನ್ನು ಪ್ರವೇಶಿಸುವ ಹೂವಯ್ಯ ಅಲ್ಲಿನ ಹಳೆಯ ಸಂಪ್ರದಾಯ ಅಥವಾ ನಂಬಿಕೆಗಳನ್ನು ಪ್ರಶ್ನಿಸುವ ಸಂವೇದನೆ, ಆ ನಂಬಿಕೆಗಳ ಪ್ರಪಂಚದಲ್ಲಿ ತೊಡಗಿರುವ ನೆಲೆಗಳನ್ನು ಕೂಡ ವಿಮರ್ಶಾತ್ಮಕವಾಗಿ ವಾಗ್ವಾದಗಳಿಗೆ ಒಳಪಡಿಸುವ ಮುಖಾಂತರ ಅಲ್ಲಿ ನವ ನಾಗರೀಕತೆಯನ್ನು, ಅಲ್ಲಿನ ಸಮುದಾಯದವರು ಸ್ವೀಕರಿಸುವ ಪ್ರಯತ್ನವನ್ನು ಮಾಡುವಂತೆ ಕುವೆಂಪುರವರು, ನಾಯಕ ಪಾತ್ರನಾದ ಹೂವಯ್ಯನ ಮೂಲಕ ಚಿತ್ರಿಸಿರುವಂತಹುದು ಗಮನ ಸೆಳೆಯುವಂತಹದಾಗಿದೆ.

'ಕಾನೂರು ಹೆಗ್ಗಡತಿ'ಯ ನಾಯಕ ಪಾತ್ರನಾದ ಹೂವಯ್ಯನು ತಾನು ಹುಟ್ಟಿ ಬೆಳೆದ ಪ್ರಪಂಚಕ್ಕೆ ಅಂದರೆ ಪರಿಸರಕ್ಕೆ ಪರಕೀಯನಾಗಿ ಪ್ರವೇಶಿಸುತ್ತಾನೆ. ನಾಗರೀಕತೆಯ ಪ್ರಭಾವಕ್ಕೆ ಒಳಗಾದ ಹೂವಯ್ಯನು ವರ್ಡ್ಸ್‌ವರ್ತ್, ಆರ್ನಾಲ್ಡ್, ಬುದ್ಧ, ಗಾಂಧಿ ಇವರುಗಳ ವಿಚಾರಧಾರೆಗಳಿಂದ ಪ್ರಭಾವಿತನಾಗಿ ಬದಲಾಗಿರುವ ಆತ ತಾನು ಹುಟ್ಟಿ ಬೆಳೆದ ಪ್ರಪಂಚದ ಜೀವನಕ್ಕೆ ಅದರ ರೀತಿ-ನೀತಿಗಳಿಗೆ ಅರ್ಪಿಸಿಕೊಂಡಿದ್ದರೂ ತದನಂತರದಲ್ಲಿ ತನಗೆ ತಾನೇ

ಹಾಗೂ ತನ್ನ ಮನಸ್ಸಿಗೆ ತಾನೇ ಪರಕೀಯನಾಗಿ ಹೊರಗೆ ಉಳಿದುಕೊಳ್ಳುವ ಪ್ರಯತ್ನ ಮತ್ತು ಅದನ್ನು ವಿಮರ್ಶಿಸುವ ಮೂಲಕ ವ್ಯಗ್ರವಾಗಿ ವಿರೋಧಿಸುತ್ತಾನೆ. ಜೋಯಿಸ ವೆಂಕಪ್ಪಯ್ಯನ ಜಗತ್ತನ್ನು ನಾವು ನೆನಪಿಗೆ ತಂದುಕೊಳ್ಳುವ ಮೂಲಕ ಅಲ್ಲಿನ ವೈಚಾರಿಕತೆಗಳನ್ನು ಹಾಗೂ ಅದನ್ನು ವಿರೋಧಿಸಿರುವುದನ್ನು ಗಮನಿಸಬಹುದು. ಆಸ್ಪತ್ರೆ ವ್ಯವಸ್ಥೆಯ ಮೂಲಕ ಆಧುನಿಕ ನಾಗರೀಕತೆಯನ್ನು ಕಾನೂರಿನಲ್ಲಿ ಇರುವ ಜನರು ಮೈಗೂಡಿಸಿಕೊಂಡಿರುವುದನ್ನು ಗುರ್ತಿಸಬಹುದು. ಇದು ಒಂದು ಬಗೆಯಾದರೆ,

ಶಿವರಾಮ ಕಾರಂತರ 'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ಮುಖ್ಯವಾಗಿ ಗ್ರಾಮೀಣ ಸಂಸ್ಕೃತಿಯಡಿಯಲ್ಲಿ ವಸಾಹತುವಿನ ಚಿತ್ರಣವನ್ನು ನಾಗವೇಣಿಯ ಮೂಲಕ ಕಾರಂತರು ಚಿತ್ರಿಸಿರುವುದನ್ನು ಕಾಣಬಹುದು. ಈ ಕಾದಂಬರಿಯಲ್ಲಿ ಬರುವಂತಹ ಸರಸೋತಿ, ಪಾರೋತಿ, ಸತ್ಯಭಾಮೆ ಮತ್ತು ನಾಗವೇಣಿ ಈ ಹೆಣ್ಣು ಮಕ್ಕಳ ಜೀವನ ಕ್ರಮವೂ ಒಬ್ಬರಿಗಿಂತ – ಇನ್ನೊಬ್ಬರಿಗೆ ಭಿನ್ನವಾಗಿ ಕಂಡರೂ ಆಯಾ ಹೆಣ್ಣುಮಕ್ಕಳು ತನ್ನ ಜೀವನವನ್ನು ಅಲ್ಲಿನ ಪರಿಸರಕ್ಕೆ ಅನುಗುಣವಾಗಿ ಸಾಗಿಸುವ ಮುಖೇನ ಅಲ್ಲಿನ ಪರಿಸರಕ್ಕೆ ತಮ್ಮನ್ನು ತಾವು ಒಗ್ಗಿಸಿಕೊಂಡಿರುತ್ತಾರೆ.

ಶಿವರಾಮ ಕಾರಂತರು ಮೂರನೇ ತಲೆಮಾರಿನಲ್ಲಿ ಕಾಣಿಸಿಕೊಳ್ಳುವಂತಹ ನಾಗವೇಣಿಯನ್ನು ಸ್ವಲ್ಪ ಭಿನ್ನವಾಗಿ ವಸಾಹತುಶಾಹಿಪ್ರಜ್ಞೆಯ ಬದುಕನ್ನು ನಿರ್ವಹಿಸುವಂತೆ ಚಿತ್ರಿಸಿರುವುದನ್ನು ನೋಡಬಹುದು. ಶಿವರಾಮ ಕಾರಂತರು ತಮ್ಮ ವೈಚಾರಿಕತೆಯ ಆಳವಾದ ನೆಲೆಯಿಂದಾಗಿ ಗಂಡು ಮತ್ತು ಹೆಣ್ಣಿನ ವಿಚಾರ, ವಿದ್ಯಾಭ್ಯಾಸದ ಅಂಶಗಳು, ಮಹಿಳೆಯರು ಕಷ್ಟಗಳನ್ನು ಧೈರ್ಯವಾಗಿ ಎದುರಿಸುವುದು, ಇದೆಲ್ಲದರ ಚಿತ್ರಣವನ್ನು ವಸಾಹತುಶಾಹಿ ಹಿನ್ನಲೆಯಲ್ಲಿಯೇ ಗ್ರಹಿಸಬಹುದಾಗಿದೆ. ಕಾರಂತರು ಹೊಸ ಜೀವನ ದರ್ಶನವನ್ನು ನಾಗವೇಣಿ ಮತ್ತು ಆಕೆಯ ಮಗನಾದ ರಾಮುವಿನ ಮುಖಾಂತರ ಮಾಡಿಸಿರುವುದು ಈ ದೃಷ್ಟಿಯಿಂದ ಗಮನಾರ್ಹವಾಗಿದೆ.

ಅಂದರೆ 'ಮರಳಿಮಣ್ಣಿಗೆ' ಕಾದಂಬರಿಯೂ ಮೂರು ತಲೆಮಾರುಗಳಿಗೆ ಸಂಬಂಧಿಸಿದಂತಹ ಕಾದಂಬರಿಯಾಗಿದ್ದು ಆಧುನಿಕ ನಾಗರೀಕತೆಯ ವಿಚಾರವನ್ನು ತನ್ನದಾಗಿಸಿಕೊಂಡ ನಾಗವೇಣಿಯೂ ಧೃತಿಗೆಡದೆ ಜೀವನದಲ್ಲಿ ಮುಂದುವರಿದು ಯಶಸ್ಸನ್ನು ಪಡೆಯುತ್ತಾಳೆ. ನಾಗವೇಣಿಯ ತಂದೆ ವಿದ್ಯಾವಂತ ವಕೀಲನಾಗಿದ್ದು ಎಲ್.ಎಲ್.ಬಿ

ಪದವೀಧರರಾಗಿ ಕಾಣಿಸಿಕೊಳ್ಳುತ್ತಾನೆ. ಮೊದಲಿಗೆ ನಾಗವೇಣಿಯೂ ತನ್ನ ಪತಿಯಾದ ಲಚ್ಚನಿಂದ ಯಾವುದೇ ರೀತಿಯಾದಂತಹ ಇಷ್ಟಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗದೇ, ಅಂತಿಮವಾಗಿ ತನ್ನ ಮಗನಾದ ರಾಮುವಿನಿಂದ ಕಳೆದು ಹೋಗಿದ್ದ ಆಸ್ತಿಯನ್ನು ಪುನಃ ಪಡೆದುಕೊಳ್ಳುವ ಘಟನೆಯ ಮೂಲಕ ವಸಾಹತುಪ್ರಜ್ಞೆಯ ಕಡೆ ಚಲಿಸುವಂತೆ ಪ್ರೇರಣೆಯನ್ನು ನೀಡಿತು ಎಂಬುದನ್ನು ಗುರ್ತಿಸಬಹುದು.

ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡತಿ' ಹಾಗೂ ಶಿವರಾಮಕಾರಂತರ 'ಮರಳಿಮಣ್ಣಿಗೆ' ಈ ಮೂರು ಕಾದಂಬರಿಗಲ್ಲಿ ಪ್ರಕಟವಾಗಿರುವಂತೆ ವಸಾಹತುಪ್ರಜ್ಞೆಯೂ ತನ್ನ ಒಂದು ಅಧಿಕಾರತ್ವದ ಮುಖಾಂತರ ಒಂದು ಸಮುದಾಯವನ್ನು ಹೇಗೆ ತನ್ನದೇ ಆದ ಅಧೀನಕ್ಕೆ ಒಳಪಡಿಸಿಕೊಳ್ಳುತ್ತದೆ ಎಂಬುದನ್ನು ಕಾಣುವುದರ ಜೊತೆಗೆ ಕಾರಂತರ ವಿಚಾರದಲ್ಲಿ ನವನಾಗರೀಕತೆಯ ಸ್ವೀಕಾರದಿಂದ ಹೆಣ್ಣು ಮಗಳೊಬ್ಬಳು ಹೇಗೆ ತನ್ನ ಜೀವನವನ್ನು ನಿರ್ವಾಹಣೆ ಮಾಡುವಂತಹ ಸಾಮರ್ಥ್ಯಗಳಿಸಿಕೊಳ್ಳುತ್ತಾಳೆ ಎನ್ನುವುದನ್ನು ಕಾಣುತ್ತೇವೆ.

ವಸಾಹತುಶಾಹಿಗೆ ಸಂಬಂಧಿಸಿದಂತೆ "ಸಾಹಿತ್ಯ ಮತ್ತು ಸಮಾಜಗಳ ನಡುವೆ ಏರ್ಪಡುವ ಸಂಬಂಧವನ್ನು ವಸಾಹತುಶಾಹಿ ಅಧ್ಯಯನದ ಹಿನ್ನೆಲೆಯಲ್ಲಿ ವಿವರಿಸಬಹುದೆನಿಸುತ್ತದೆ. ಸಾಮಾನ್ಯವಾಗಿ ಯಾವುದೇ ಕಾಲದ ಅನುಭವಗಳನ್ನು ಅಥವಾ ಸಮಾಜ, ರಾಷ್ಟ್ರಗಳ ಕುರಿತ ಸಂಗತಿಗಳನ್ನು ಆಯಾ ಕಾಲದ ಸಾಹಿತ್ಯಿಕ ಚಳುವಳಿಗಳಲ್ಲಿ ನಿರೀಕ್ಷಿಸುವುದು ಸರಿಯಾದ ಕ್ರಮ. ಸಾಮಾಜಿಕ ಸನ್ನಿವೇಶಗಳು ನೇರವಾಗಿ ದಾಖಲಾಗುವುದು ಬರವಣಿಗೆಯಂತಹ ಮಾಧ್ಯಮಗಳಲ್ಲಿ ಸಾಹಿತ್ಯ ಅಂದಂದಿನ ಜನ ಜೀವನದ ವರ್ತಮಾನಗಳನ್ನು ತನ್ನ ಗರ್ಭದೊಳಗೆ ಸೇರಿಸಿಕೊಂಡಿದ್ದರಿಂದಲೇ ಸಾಹಿತ್ಯದ ಅಧ್ಯಯನ ಸಮಕಾಲೀನವಾಗಿರುತ್ತದೆ. ಸಾಹಿತ್ಯಕ್ಕೂ ಮತ್ತು ನಮ್ಮ ದೈನಂದಿನ ಜೀವನಕ್ಕೂ ಏನೇನೂ ಸಂಬಂಧವಿಲ್ಲವೆಂದು ನಿರಾಕರಿಸುವಂತಿಲ್ಲ. ಸಾಹಿತ್ಯ ಮತ್ತಿತ್ತರ ವಿಷಯಗಳಿಗೆ ಸಂಬಂಧಿಸಿದ ಇವತ್ತಿನ ಬಹುಮುಖಿ ಸಂಸ್ಕೃತಿಯ ಒಲವುಗಳು ಮುಂಚೂಣಿಗೆ ಬರಲು ಸಾಹಿತ್ಯಿಕ ಮತ್ತು ಸಮಾಜಗಳ ನಡುವಿನ ಸಂಬಂಧವೇ ಮುಖ್ಯಕಾರಣ. ವಸಾಹತುಶಾಹಿಯ ಸಂಘರ್ಷದಲ್ಲಿ ಕನ್ನಡ ಸಮಾಜದ ಅನನ್ಯತೆಯನ್ನು ಮತ್ತು ಈ ಹೋರಾಟದಲ್ಲಿ ಹುಟ್ಟಿದ ವಿಶಿಷ್ಟ ಆಕೃತಿಗಳನ್ನು ಸಾಹಿತ್ಯದ ಮೂಲಕ ತಿಳಿಯುವುದು ಅಧ್ಯಯನದ ತುರ್ತಾಗಿದೆ"1 ಎಂಬುದನ್ನು ಡಾ. ಐ ಜೆ. ಮ್ಯಾಗೇರಿ ರವರು 'ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು' ಎಂಬ ಮಹಾ ಪ್ರಬಂಧದಲ್ಲಿ ನಿರೂಪಿಸಿದ್ದಾರೆ.

ವಸಾಹತುಶಾಹಿಯ ಮೂಲಕ ಮತ್ತು ಅದರ ಮಾಧ್ಯಮವಾದ ಇಂಗ್ಲೀಷ್ ಶಿಕ್ಷಣದ ಮೂಲಕ ಮಾನವ ಕೇಂದ್ರಿತ ಚಿಂತನೆ ಭಾರತೀಯ ಸಂವೇದನೆಯನ್ನು ಪ್ರವೇಶಿಸಿತು. ಇದರಿಂದಾಗಿ ಸುಸ್ಪಷ್ಟವಾಗಿ ತಿಳಿದು ಬರುವಂತಹ ಅಂಶವೇನೆಂದರೆ ಆಯಾ ಸಮಾಜದಲ್ಲಿನ ವಾಸ್ತವವಾದದ ಹಿನ್ನಲೆಯಲ್ಲಿ ಇದ್ದುಕೊಂಡು ವೀಕ್ಷಿಸುವ ಧೋರಣೆಯೂ ಸಹ ಬೆಳೆಯತೊಡಗಿತು. ಇದರಿಂದಾಗಿ ನಮಗೆ ಕುವೆಂಪು ಮತ್ತು ಶಿವರಾಮ ಕಾರಂತರು ಕನ್ನಡ ವಾಸ್ತವತಾವಾದಿ ಕಾದಂಬರಿಯ ಶ್ರೇಷ್ಠ ಪ್ರತಿನಿಧಿಗಳಾಗಿ ಹೊರ ಹೊಮ್ಮಿರುವುದು ಸ್ಪಷ್ಟವಾಗುತ್ತದೆ.

# ಅಧ್ಯಾಯ-3

## ಕಾದಂಬರಿಗಳಲ್ಲಿ ಕಂಡುಬರುವಂತಹ ಸ್ಥಳೀಯತೆ

ಕುವೆಂಪು ಮತ್ತು ಕಾರಂತರ ಕೃತಿಗಳಲ್ಲಿ ನಾವು ಮುಖ್ಯವಾಗಿ ಸ್ಥಳೀಯತೆಯ ಚಿತ್ರಣವೂ ಪರಿಣಾಮಕಾರಿಯಾಗಿ ಮತ್ತು ಒಂದು ಮುಖ್ಯ ಆಶಯವಾಗಿ ಒಡಮೂಡಿರುವುದನ್ನು ಪರಿಶೀಲಿಸಬೇಕಾಗುತ್ತದೆ. ಸ್ಥಳೀಯತೆಯ ಸಂವೇದನೆಯಲ್ಲಾದ ಸೂಕ್ಷ್ಮ ಬದಲಾವಣೆಗಳನ್ನು ಈ ಕಾದಂಬರಿಗಳು ಶೋಧಿಸುತ್ತವೆ. ಕಾರಂತರ ಸಾಂಪ್ರದಾಯಿಕ ಪಾತ್ರಗಳು ಇರುವಂತಹ ಪರಿಸರವನ್ನು ಹಾಗೆಯೇ ಸ್ವೀಕರಿಸುವ ಮುಖಾಂತರ ಬದುಕನ್ನು ಸಾಗಿಸುತ್ತವೆ. ಸ್ಥಳೀಯತೆಗೆ ಸಂಬಂಧಿಸಿದಂತೆ ನಂಬಿಕೆಗಳಿಗೆ ಅನುಗುಣವಾಗಿ ಪ್ರಾಮಾಣಿಕವಾಗಿ ಬದುಕುವುದೇ ಮುಖ್ಯವಾದರೆ, ಆ ಮೌಲ್ಯಗಳ ಸಮಂಜಸತೆಯ ವಿವೇಚನೆಯೂ ಮೊಟಕುಗೊಳ್ಳುತ್ತದೆ ಎಂಬುದು ಗಮನಿಸತಕ್ಕ ಅಂಶವಾಗಿದೆ. ಇಂತಹ ಒಂದು ಮಿತಿಯು ಕಾರಂತರ ಕೆಲವೊಂದು ಕೃತಿಗಳಲ್ಲಿ ಇದ್ದರೂ ಸಹ 'ಮರಳಿ ಮಣ್ಣಿಗೆ'ಯಂಥ ಕಾದಂಬರಿಯಲ್ಲಿ ವಿವಿಧ ತಲೆಮಾರುಗಳ ಸಮುದಾಯದಲ್ಲಿ ಆಗುವಂತಹ ಮಾರ್ಪಾಡುಗಳ ವಿನ್ಯಾಸವನ್ನು ನಾವು ಗುರ್ತಿಸಬೇಕಾಗುತ್ತದೆ.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಒಡಮೂಡಿ ಬರುವ ಪ್ರತಿಯೊಂದು ಪಾತ್ರಕ್ಕೂ ಕೂಡ ಬಹಳ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಸಾಮಾನ್ಯವಾದ ಪಾತ್ರಗಳೂ ಕೂಡ ಜನಾಂಗದ ಸ್ಥಳೀಯತೆಯಲ್ಲಿ ಪ್ರಮುಖವಾದುದಾಗಿವೆ. ಅವು ತಮ್ಮ ವೈಯಕ್ತಿಕ ಬದುಕಿನ ಮಿತಿಗಳನ್ನು ಮೀರುತ್ತ ಅಗಾಧವಾದ ರೀತಿಯಲ್ಲಿ ಹೊಸ ಹುಟ್ಟು ಪಡೆದಿರುವುದನ್ನು ಗಮನಿಸಬಹುದು.

ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಅಥವಾ 'ಕಾನೂರೂ ಹೆಗ್ಗಡಿತಿ' ಮತ್ತು ಶಿವರಾಮಕಾರಂತರ 'ಮರಳಿಮಣ್ಣಿಗೆ' ಇವುಗಳಲ್ಲಿ ಸ್ಥಳೀಯತೆ ಎಂಬುವುದು ಪ್ರಕಟವಾಗುವುದೇ ಪ್ರಕೃತಿ ಮತ್ತು ಸಂಸ್ಕೃತಿಯ ಹಿನ್ನಲೆಯಲ್ಲಿ ಎಂಬುದನ್ನು ನಾವು ಮೂರು ಕಾದಂಬರಿಗಳಲ್ಲಿ ಗ್ರಹಿಸಬಹುದಾಗಿದೆ.

ಕುವೆಂಪುರವರ ಕಾದಂಬರಿಗಳಲ್ಲಿ ಮನುಷ್ಯ – ಮನುಷ್ಯರ ಸಂಬಂಧಗಳು ಮಾನವ ಮತ್ತು ಪ್ರಾಣಿ ಸಂಬಂಧಗಳನ್ನು ಸಹ ಕಾಣಬಹುದಾಗಿದೆ. ವಿಕೃತಿ ಅಲ್ಲದು ಸಂಸ್ಕೃತಿ, ಪ್ರಾಣಿ ವರ್ತನೆಯನ್ನು ಮಾಡುವುದು ವಿಕೃತಿ, ಅದನ್ನು ಮೀರಿದ್ದು ಸಂಸ್ಕೃತಿ. ಸಂಸ್ಕಾರಕ್ಕೆ

ಒಳಗಾಗಿರುವುದು ಸಂಸ್ಕೃತಿ, ಅಲ್ಲದ್ದು ವಿಕೃತಿ. ಅಬೇಧ್ಯ ಪ್ರಕೃತಿಯಲ್ಲಿಯೇ ಸಂಸ್ಕೃತಿ ಎಂಬುದು ಒಂದೇ ಆಗಿರದೇ ಅಭಿನ್ನವಾಗಿದೆ.

ಮಾನವನ ಸಹಜ ಗುಣಗಳಲ್ಲಿ ನಾವು ಪ್ರಾಣಿ ವರ್ತನೆಯನ್ನು ಮಾಡಬಾರದು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಚೀಂಕ್ರ ಮತ್ತು ದೇಯಿಯ ಸಂಬಂಧವನ್ನು ಗ್ರಹಿಸಬಹುದು. ಕುಡಿದಂತಹ ಅಮಲಿನಲ್ಲಿ ದೇಯಿಯನ್ನು ಬಳಸಿಕೊಂಡಂತಹ ರೀತಿ ಪ್ರಾಣಿ ಸಹಜವಾದದ್ದು. ಕೊನೆಗೆ ದೇಯಿಯ ಸಾವಿಗೆ ಕಾರಣನಾದ ಚೀಂಕ್ರ ಪಿಜಿಣಿಯ ಹೆಂಡತಿಯಾಗಿರುವ ಅಕ್ಕಣಿಯನ್ನು ಬಳಸಿಕೊಳ್ಳುವ ಕ್ರಮ ಪ್ರಾಣಿ ಸಹಜವಾದುದಾಗಿದೆ.

ಕಾದಂಬರಿಯನ್ನು ಸೂಕ್ಷ್ಮವಾಗಿ ನೋಡಿದಾಗ ಹೂವಳ್ಳಿ ವೆಂಕಣ್ಣಯ್ಯ ಹೆಂಡತಿ ಸತ್ತ ನಂತರ  ಬೆಳೆದ ಮಗುವಿಗೆ ಮದುವೆ ನಿಶ್ಚಯಿಸದೆ ತನ್ನ ಸಾಲವನ್ನು ತೀರಿಸಿಕೊಳ್ಳುವ ಸಲುವಾಗಿ ತನ್ನ ಮಗಳಾದ ಚಿನ್ನಮ್ಮಳನ್ನು ಮುದುಕನಾದ ಭರಮೈ ಹೆಗ್ಗಡೆಗೆ ಕೊಟ್ಟು ವಿವಾಹ ಮಾಡಲು ಸಿದ್ಧನಾಗುತ್ತಾನೆ. ನಾಗಕ್ಕನಿಗೆ ವೆಂಕಣ್ಣ ಇಷ್ಟವಿಲ್ಲದೇ ಇದ್ದರೂ ನಾಗತ್ತೆಯ ಕುತಂತ್ರದಿಂದ ವೆಂಕಣ್ಣ ತನ್ನ ಕಾಮತೃಷೆಯನ್ನು ತೀರಿಸಿಕೊಳ್ಳಲು ನಾಗಕ್ಕಳನ್ನು ಬಳಸಿಕೊಳ್ಳುತ್ತಾನೆ. ಆದರೆ ಅದು ತನ್ನ ಅರಿವಿಗೆ ಬಾರದ ಕಾರಣ ನಾಗಕ್ಕ ತನ್ನ ಗಂಡನಾದ ನಾಗಣ್ಣನೇ ಬಂದು ತನ್ನನ್ನು ಸೇರಿರುತ್ತಾನೆ ಎಂದು ಭಾವಿಸುತ್ತಾಳೆ. ಮುಂದೆ ಅನುಮಾನಕ್ಕೆ ಒಳಗಾದ ನಾಗಕ್ಕ ನಾಗತ್ತೆಯ ಕುತಂತ್ರವನ್ನು ಪರೀಕ್ಷಿಸುತ್ತಾಳೆ. ಕುತಂತ್ರವನ್ನು ಮಾಡಿದಂತಹ ನಾಗತ್ತೆಯೇ ತನ್ನ ಕುತಂತ್ರಕ್ಕೆ ಮಣ್ಣು ಎಳೆದುಕೊಳ್ಳುತ್ತಾಳೆ. ಹೀಗೆ ಅಲ್ಲಿನ ಸ್ಥಳೀಯತೆಯ ಒಳಗಡೆ ಮಾನವ ಸಹಜ ಗುಣಗಳನ್ನು ಮೀರಿ ಪ್ರಾಣಿ ಸಹಜ ಗುಣಗಳನ್ನು ಒಳಗೊಂಡಿರುವಂತಹ ಉದಾಹರಣೆಗಳು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕಂಡು ಬರುತ್ತದೆ.

ಸ್ಥಳೀಯತೆಗೆ ಸಂಬಂಧಿಸಿದಂತೆ ಕಾದಂಬರಿಗಳಡಿಯಲ್ಲಿ ನಾವು ಮುಖ್ಯವಾಗಿ ಆಯಾ ಪರಿಸರದ ಜನರ ಜೀವನ ವಿಧಾನ, ಜೀವನ ಶೈಲಿ, ಜೀವನ ಮೌಲ್ಯ, ನಂಬಿಕೆ, ರೂಢಿ ಸಂಪ್ರದಾಯಗಳನ್ನು ಒಳಹೊಕ್ಕು ನೋಡಬಹುದಾಗಿದೆ.

ಕುವೆಂಪುರವರ 'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ಮೈಸೂರಿನಿಂದ – ಶಿವಮೊಗ್ಗದ ಕಾನೂರಿಗೆ ಬಂದಂತಹ ಹೂವಯ್ಯ ತನ್ನ ವೈಚಾರಿಕತೆಯ ಮುಖೇನ ವಸಾಹತು ಪ್ರಜ್ಞೆಯಿಂದಾಗಿ ತಾನು ಆ ಸ್ಥಳೀಯತೆಗೆ ಹೊಂದಿಕೊಳ್ಳದೇ ಹೊರಗಿನವನಾಗಿ ಕಂಡು ಬರುತ್ತಾನೆ.

ಕಾನೂರಿನಲ್ಲಿ ತುಂಬಿಕೊಂಡಿರುವಂತಹ ಮೌಢ್ಯ ಅಂಧಕಾರಗಳನ್ನು ಹೂವಯ್ಯ ವಿರೋಧಿಸುತ್ತಾನೆ ಆ ಸಂದರ್ಭದಲ್ಲಿ ತುಂಗಾತೀರದ ಅಗ್ರಹಾರದ ಜೋಯಿಸರಾದ ವೆಂಕಪ್ಪನವರು ಮಲೆನಾಡಿನ ಜನರ ಮೌಢ್ಯತೆಯನ್ನು ತಮ್ಮ ಬದುಕಿಗೆ ಬಂಡವಾಳವಾಗಿ ಇಟ್ಟುಕೊಂಡಿದ್ದರು ಅವರ ಪ್ರಮುಖವಾದ ಕೆಲಸ ದೇವಸ್ಥಾನದ ಪೂಜೆಯಾಗಿದ್ದರೂ ಸಹ ಅಲ್ಲಿನ ಪರಿಸರದಲ್ಲಿ ಮುಖ್ಯವಾಗಿ ಮೌಢ್ಯವನ್ನು ಹೆಚ್ಚಿಸುವ ಸಲುವಾಗಿ ಭವಿಷ್ಯತ್ತು ಹೇಳುವುದು, ಭೂತಗಳಿಗೆ ಹಣ್ಣುಕಾಯಿ ಕೊಡುವುದು, ಮಂತ್ರದಿಂದ ದೆವ್ವಗಳನ್ನು ಬಿಡಿಸುವುದು, ಒಮ್ಮೆ ಒಂದು ಬಾರಿ ಸುಬ್ಬಯ್ಯಗೌಡರು ಶ್ಲೇಷ್ಮ ಜ್ವರದಿಂದ ನರಳುತ್ತಿದ್ದಾಗ ತಣ್ಣೀರು ಮುಟ್ಟಿಸಿ, ಪೂಜೆ ಮಾಡಿಸಿ, ವಿಷಮಗೊಂಡಿದ್ದರಿಂದಲೇ ಸತ್ತರು ಎಂಬುದಾಗಿ ಅರಿತಿದ್ದ ಹೂವಯ್ಯನಿಗೆ ವೆಂಕಪ್ಪ ಜೋಯಿಸರನ್ನು ನೋಡಿದರೆ ಒಂದು ರೀತಿಯ ತಿರಸ್ಕಾರ ಮನೋಭಾವವೆಂಬುದು ಇತ್ತು. ಭೂತ, ಪ್ರೇತಗಳ ಪೂಜೆ, ವಿಭೂತಿ ಕೊಡುವುದು ಮುಂತಾದವುಗಳನ್ನು ಹೂವಯ್ಯನು ಸಂಪೂರ್ಣವಾಗಿ ವಿರೋಧಿಸುತ್ತಾನೆ. ಆದ ಕಾರಣ ಸ್ಥಳೀಯರ ಕುತಂತ್ರದಿಂದ ತಾನು ಪ್ರೀತಿಸಿದಂತಹ ಸೀತೆಯಿಂದ ದೂರವಾಗುತ್ತಾನೆ. ಮತ್ತೊಂದೆಡೆ ಹೂವಯ್ಯನ ಪ್ರಯತ್ನದಿಂದ ಮಲೆನಾಡಿನಲ್ಲಿ ಕಂಡು ಬರುವಂತಹ, ಅನೇಕ ಹಳ್ಳಿಗಳು ನಾಗರೀಕತೆಯೆಡೆಗೆ ಮುನ್ನಡೆಯುವುದನ್ನು ಗಮನಿಸಬಹುದು. ಕಾದಂಬರಿಯಲ್ಲಿ ಕಂಡುಬರುವಂತಹ ಕೆಲವು ಪಾತ್ರಗಳು ಅನಾಗರಿಕ ಬದುಕಿನಿಂದ ನಾಗರೀಕತೆಯ ಬದುಕಿನ ಕಡೆ ಸಾಗುವುದನ್ನು ಗ್ರಹಿಸಬಹುದಾಗಿದೆ. ಇದರಿಂದ ಬೇಸರಗೊಂಡ ವೆಂಕಪ್ಪನವರು ಕಾನೂರು ಮನೆತನದ ಯಜಮಾನರಾದ ಚಂದ್ರಯ್ಯ ಗೌಡರನ್ನು ಹೂವಯ್ಯನ ವಿರುದ್ಧ ಎತ್ತಿಕಟ್ಟುತ್ತಾರೆ ಅಂತಿಮವಾಗಿ ಸೀತೆಯನ್ನು ಹೂವಯ್ಯನಿಂದ ದೂರಮಾಡುವ ಸಲುವಾಗಿ ತಂತ್ರ ಹೂಡಿ ತನ್ನವೊಂದು ಸೇಡನ್ನು ತೀರಿಸಿಕೊಳ್ಳುವ ಪ್ರಯತ್ನವೂ ಎಲ್ಲರ ಗಮನಾರ್ಹವಾದುದಾಗಿದೆ.

ಮೊದಲಿಗೆ ಕಾನೂರು ಹೇಗೆ ಮೌಢ್ಯ ಆಚರಣೆಗೆ ಮಾರುಹೊಗಿದ್ದು ತದನಂತರದಲ್ಲಿ ಅದು ಸ್ಥಳೀಯರಲ್ಲಿ ಮಾರ್ಪಾಟಾಯಿತು ಎಂಬುದನ್ನು 'ಕಾನೂರು ಹೆಗ್ಗಡಿತಿ'ಯ ನಾಯಕನಾದ ಹೂವಯ್ಯನ ಪಾತ್ರದಿಂದ ತಿಳಿಯ ಬಹುದಾಗಿದೆ. ಸ್ಪಷ್ಟವಾಗಿ ಹೇಳುವುದಾದರೆ ಒಂದು ಕಾಲದ ಜೀವನ ಮೌಲ್ಯಗಳ ಆದರ್ಶದ ಪ್ರತಿಮೆಯಂತೆ ಕಾಣುವ ಹೂವಯ್ಯನ ವ್ಯಕ್ತಿತ್ವ ಆ ಕಾಲದ ಸಂಘರ್ಷಾತ್ಮಕ ಬದುಕನ್ನು ಸಂಕೇತಿಸುವಂತಿದೆ.

ಸ್ಥಳೀಯತೆಯಲ್ಲಿ ಮದುವೆಗೆ ಸಂಬಂಧಿಸಿದಂತೆ ಮುಖ್ಯವಾಗಿ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಗಳಲ್ಲಿಯೂ ಕೂಡ ತಾವು ಬಯಸಿದ ಹೆಣ್ಣಿಗೆ ನಿರಂತರವಾಗಿ ತೊಳಲಾಡುವ ಪುರುಷ ಪಾತ್ರಗಳನ್ನು ನೋಡಬಹುದು. ಆದರೆ ಹೆಣ್ಣನ್ನು ಪಡೆಯುವಂತಹ ಸಂದರ್ಭದಲ್ಲಿ ಹೂವಯ್ಯ ಸೋಲುತ್ತಾನೆ! ಮುಕುಂದಯ್ಯ ಗೆಲ್ಲುತ್ತಾನೆ. ಇದಕ್ಕೆ ಪ್ರಮುಖವಾಗಿ ಆಯಾ ಸ್ಥಳೀಯತೆಯ ಜೊತೆಗೆ ವಸಾಹತುಶಾಹಿಪ್ರಜ್ಞೆಯೂ ಸಹ ಕಾರಣವಾಗುತ್ತದೆ.

ಸ್ಥಳೀಯತೆಗೆ ಪರಕೀಯನಾಗಿ ನೋಡುವುದಕ್ಕೂ ಸ್ಥಳೀಯತೆಯಲ್ಲಿಯೇ ಇದ್ದು ಅದರ ಮೂಲಕ ಆ ಸ್ಥಳೀಯತೆಯನ್ನು ನೋಡುವುದಕ್ಕೂ ವ್ಯತ್ಯಾಸವಿದೆ. ಏಕೆಂದರೆ ಹೂವಯ್ಯ ಸಂಪೂರ್ಣವಾಗಿ ಸ್ಥಳೀಯತೆಗೆ ಪರಕೀಯನಾಗಿ, ಸಂಬಂಧಗಳನ್ನು ಮೀರಿ ವರ್ತಿಸುತ್ತಾನೆ ಆದ್ದರಿಂದ ಆತ ಸೀತೆಯನ್ನು ಪಡೆಯುವಲ್ಲಿ ಸ್ಥಳೀಯತೆಯ ಕುತಂತ್ರವೇ ಕಾರಣವಾಗುತ್ತದೆ. ಆದರೆ ಸ್ಥಳೀಯತೆಯಲ್ಲೇ ಇದ್ದು, ಸ್ಥಳೀಯತೆಯ ಸಂಬಂಧಗಳನ್ನು ಅರಿತ ಮುಕುಂದಯ್ಯ ಚಿನ್ನಮ್ಮಳನ್ನು ಪಡೆಯುವಲ್ಲಿ ಯಶಸ್ವಿಯಾಗುತ್ತಾನೆ. ಹೀಗೆ ಸ್ಥಳೀಯತೆ ಎಂಬುದನ್ನು ಅವರ ಜೀವನ-ಬದುಕಿನ ಕ್ರಮವಾಗಿರುವುದನ್ನು ತಿಳಿಯಬಹುದು.

ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಪಾರೋತಿ ಮತ್ತು ಸರೋಸತಿಯರು ತಮ್ಮ ಬದುಕನ್ನು ಆ ಸ್ಥಳೀಯತೆಗೆ ಒಗ್ಗಿಸಿಕೊಳ್ಳುತ್ತಾರೆ. ಹಾಗೆಯೇ ಆಚಾರ, ವಿಚಾರ, ನಂಬಿಕೆ, ಸಂಪ್ರದಾಯಗಳಿಗೆ ತಮ್ಮನ್ನು ತಾವು ಅರ್ಪಿಸಿಕೊಂಡಿರುತ್ತಾರೆ. ಪಾರೋತಿಯು ತನ್ನ ಇಡೀ ಜೀವ ಮಾನವೆಲ್ಲಾ ಪುರುಷ ಪ್ರಧಾನ್ಯತೆಯನ್ನೇ ಕುರುಡಾಗಿ ಒಪ್ಪಿಕೊಳ್ಳುತ್ತಾಳೆ. ಆಕೆಗೆ ಮಕ್ಕಳು ಇಲ್ಲದ ಕಾರಣ ಇಡೀ ಸಮಾಜವೂ ಪಾರೋತಿಯನ್ನು ಬಂಜೆ ಎಂಬುವುದಾಗಿ ಗುರ್ತಿಸಿದ ಕಾರಣದಿಂದಾಗಿ, ರಾಮ ಐತಾಳ ಯಾವುದೇ ರೀತಿಯಾದಂತಹ ವಿಚಾರವನ್ನೂ ಸಹ ಪಾರೋತಿಗೆ ಹೇಳದೆಯೇ ಸತ್ಯಭಾಮೆಯನ್ನು ಮದುವೆಯಾಗುತ್ತಾನೆ. ಹೀಗೆ ಪುರುಷಪ್ರಧಾನವಾದ ಸಮಾಜವನ್ನು ಈ ಕಾದಂಬರಿಯಲ್ಲಿ ನೋಡಬಹುದು. ಆ ಸಂದರ್ಭದಲ್ಲಿ ಪಾರೋತಿಯು ಯಾವುದೇ ರೀತಿಯಾದಂತಹ ಮರು ಮಾತನ್ನು ಹೇಳದೆ ತಾನೂ ಸಹ ಆ ಮದುವೆ ಸಮಾರಂಭದಲ್ಲಿ ಪಾಲ್ಗೊಳ್ಳುವಂತಹ ವಿಚಾರವೂ ಉಲ್ಲೇಖನೀಯ. ಇದು ಅವಳ ಮತ್ತು ಪರಿಸ್ಥಿತಿಯ ಪ್ರತೀಕ. ರಾಮ ಐತಾಳರ ಮೊದಲನೆಯ ಪತ್ನಿಯಾಗಿದ್ದರೂ ಸಹ ಆಕೆ ರಾಮ ಐತಾಳರ ಮಾತಿಗೆ ಯಾವುದೇ ರೀತಿಯಾದಂತಹ ಮರು ಮಾತನ್ನು ಮಾತನಾಡದೇ,

ಇದ್ದಂತಹ ಸ್ಥಳೀಯತೆಯ ವಾತಾವರಣಕ್ಕೆ ಅದರ ಒಪ್ಪಿತ (ಪುರುಷ ಪ್ರಧಾನ) ಮೌಲ್ಯಗಳಿಗೆ ಹೊಂದಿಕೊಂಡು ಉಸಿರೆತ್ತದೆ ಪಾರೋತಿಯು ತನ್ನ ಜೀವನವನ್ನು ಸಾಗಿಸುತ್ತಾಳೆ. ಆದರೆ ಸರೋಸತಿಯು ತನ್ನ ಬದುಕನ್ನು ರೂಪಿಸಿಕೊಳ್ಳುವ ವಿಧಾನವನ್ನು ಸ್ವಲ್ಪ ಭಿನ್ನವಾಗಿಸಿದ್ದಾಳೆ. ಸಮುದ್ರದ ನೀರಿನಲ್ಲಿ ಪೂರ್ವಾಭಿಮುಖವಾಗಿ ಚಲಿಸುವ ಮೂಲಕ ದಿಮ್ಮಿಗಳನ್ನು ತರುವ ಕ್ರಿಯೆಯ ಮೂಲಕವೇ ಆಕೆಯಲ್ಲಿ ಹೇಗೆ ಛಾಲೆಂಜ್ ಎಂಬುದು ಇದ್ದು, ಆ ಮೂಲಕ ಆಕೆ ಬದುಕನ್ನು ಸಾಗಿಸುವುದನ್ನು ನಾವೆಲ್ಲರೂ ಗುರ್ತಿಸಬಹುದು. ನಾಗವೇಣಿಯನ್ನು ಸ್ವಲ್ಪ ಭಿನ್ನವಾಗಿ ಕಾರಂತರು ಚಿತ್ರಿಸುವ ಮೂಲಕ ಇಲ್ಲಿ ಸಾಂಪ್ರದಾಯಿಕ ವಿಚಾರಗಳನ್ನು ಮತ್ತು ಆಧುನಿಕ ವಿಚಾರಗಳ ಮುಖಾಮುಖಿ ಮಾಡಿರುವುದನ್ನು ಈ ಸಂದರ್ಭದಲ್ಲಿ ಗ್ರಹಿಸಬಹುದಾಗಿದೆ. ಲಚ್ಚನಿಂದಾಗಿ ಆಕೆ ಯಾವುದನ್ನೆಲ್ಲಾ ಮೊದಲು ತಾನು ಕಳೆದುಕೊಂಡಿರುತ್ತಾಳೋ, ಅದೆಲ್ಲವನ್ನು ಸ್ವತಃ ತನ್ನ ಮಗನಾದ ರಾಮುವಿನಿಂದಾಗಿ ಪುನಃ ಪಡೆದು ಕೊಳ್ಳುವ ಅಂಶವು ಕಾರಂತರ ಕಾದಂಬರಿಯ ಈ ಪ್ರಸಂಗದಲ್ಲಿ ಸ್ಪಷ್ಟವಾಗಿ ಸ್ಥಳೀಯತೆ ಹಾಗೂ ವಸಾಹತುಗಳ ಸಂಘರ್ಷ ಮತ್ತು ಅದರ ಫಲಿತಾಂಶಗಳ ಮೂಲಕ ತಿಳಿದುಬರುತ್ತದೆ.

<u>ಜೀವನ ಕ್ರಮ</u>

'ಮಲೆಗಳಲ್ಲಿ ಮದುಮಗಳು' ಈ ಕಾದಂಬರಿಯಲ್ಲಿ ಅಲ್ಲಿನ ಜನರ ಬದುಕಿನ ಕ್ರಮ ಹೇಗಿತ್ತು ಎಂಬುದನ್ನು ನೋಡಬಹುದಾಗಿದೆ. ಇಲ್ಲಿ ಅಧಿಕಾರಸ್ಥ ವರ್ಗವೂ ಹೇಗೆ ಅಧಿಕಾರವಿಲ್ಲದವರ ಮೇಲೆ ತನ್ನ ಒಂದು ದಬ್ಬಾಳಿಕೆಯನ್ನು ನಡೆಸುತ್ತದೆ ಎಂಬುವುದರ ಅರಿವು ನಮಗಾಗುತ್ತದೆ. ರೋಗಗ್ರಸ್ಥನಾದ ನಡುವಯಸ್ಸಿನ ಸಿಂಭಾವಿ ಭರಮ್ಮೆ ಹೆಗ್ಗಡೆಯೂ ಸಂತಾನವೆಂಬುದು ಇಲ್ಲದ ಕಾರಣದಿಂದಾಗಿ, ಸುಬ್ಬಣ್ಣ ಹೆಗ್ಗಡೆಯ ಕಿರಿಯ ಮಗಳಾದ ಮಂಜಮ್ಮಳನ್ನು ಮದುವೆಯಾಗಲು ಬಯಸುವುದು, ಆದರೆ ಅಂತಿಮವಾಗಿ ಮದುವೆ ನಿಂತು ಹೋಗುವುದು ಈ ದೃಷ್ಟಿಯಿಂದ ಗಮನಾರ್ಹವಾಗಿದೆ. ತನ್ನ ಸಾಲವನ್ನು ತೀರಿಸುವ ಸಲುವಾಗಿ ಹೂವಳ್ಳಿ ವೆಂಕಣ್ಣನ ಮಗಳಾದ ಚಿನ್ನಮ್ಮಳನ್ನು ಮದುವೆಯಾಗಲು ಮಾಡುವಂತಹ ಪ್ರಯತ್ನಗಳು ಆ ನಡುವೆ ಏರ್ಪಡುವಂತಹ ಕುಟುಂಬದ ಘರ್ಷಣೆಗಳನ್ನೂ ನೋಡಬಹುದಾಗಿದೆ. ಕೆಳವರ್ಗದ ಜನರು ಮೇಲು ವರ್ಗದ ಜನರನ್ನು ಆಶ್ರಯಿಸಿ ಬದುಕುತ್ತಾರೆ. ಉದಾಹರಣೆಗೆ ಜೀತದಾಳುಗಳಾದ ಇವರನ್ನ ಗಟ್ಟಿ ಆಳುಗಳು ಎಂಬುದಾಗಿಯೂ ಸಹ ನಾವು ಗುರ್ತಿಸಬಹುದು ಪೀಂಚಲು, ಐತ ಇವರುಗಳು ಮೇಲು ವರ್ಗದ ಜನರನ್ನು ಆಶ್ರಯಿಸಿಕೊಂಡು ಬದುಕುತ್ತಾರೆ. ಹಾಗೆಯೇ ಮೇಲು ವರ್ಗದ ಜನರನ್ನು ಆಶ್ರಯಿಸಿಕೊಂಡು ಕೆಳವರ್ಗದ ಜನರು ತಮ್ಮ ಜೀವನವನ್ನು ಸಾಗಿಸುತ್ತಾರೆ. ಅಧಿಕಾರ

ಇರುವಂತಹ ಜನರು ತಮಗೆ ಕೆಲವು ನಿಯಮಗಳನ್ನು ಹಾಗೂ ಕೆಳವರ್ಗದ ಜನರಿಗೆ ಬೇರೆಯಾದ ನಿಯಮಗಳನ್ನು ರೂಪಿಸುತ್ತಾರೆ. ಅದರ ಪ್ರಕಾರ ಅವರು ತಮ್ಮ ತಮ್ಮ ಜೀವನವನ್ನು ಸಾಗಿಸಬೇಕಾಗಿತ್ತು ಎಂಬ ಅಂಶವನ್ನು ನಾವು ಕಾದಂಬರಿಗಳಲ್ಲಿ ಕಾಣಬಹುದು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬಾವಿಕೊಪ್ಪದ ನಿವಾಸಿಯಾದ ನಾಗತ್ತೆಯು ಸಾಮಾಜಿಕ ನೀತಿಯನ್ನು ಉಲ್ಲಂಘಿಸುವ ಮತ್ತು ತನ್ನದೇ ಆದಂತಹ ಕಾರ್ಯ ಸಾಧನೆಗೆ ಕೆಳಮಟ್ಟದ ಕೆಲವು ಆಲೋಚನೆಗಳನ್ನು ಮಾಡುವ ಮುಖೇನ ತನ್ನದೇ ಆದಂತಹ ಒಂದು ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತಾಳೆ. ತನ್ನ ಸೊಸೆಯಾದ ವಿಧವೆ ನಾಗಕ್ಕನನ್ನು 'ಕೂಡಿಕೆ' ಮಾಡಿಸುವಲ್ಲಿ ಬಹಳಷ್ಟು ವಿವಿಧ ತಂತ್ರಗಳನ್ನು ಹೂಡಿ ಆ ಕಾರ್ಯದಲ್ಲಿ ಯಶಸ್ವಿಯನ್ನು ಗಳಿಸಿಕೊಳ್ಳುವಳಾಗಿ ಕಾಣಿಸಿಕೊಳ್ಳುತ್ತಾಳೆ. ಚಿಕ್ಕ ವಯಸ್ಸಿನಲ್ಲಿಯೇ ತನ್ನ ಗಂಡನನ್ನು ಕಳೆದುಕೊಂಡಂತಹ ನಾಗಕ್ಕ, ಚಿನ್ನಮ್ಮಳ ಮೇಲಿನ ಮಮಕಾರದಿಂದಾಗಿ ವೆಂಕಣ್ಣನನ್ನು ಕೂಡಿಕೆ ಮಾಡಿಕೊಳ್ಳುವ ಮೂಲಕ ತನ್ನ ಜೀವನವನ್ನು ಸಾಗಿಸುತ್ತಾಳೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಗಟ್ಟದ ಕೆಳಗಿನವರಾದಂತಹ ಚೀಂಕ್ರ-ದೇಯಿ, ಐತ-ಪೀಂಚಲು, ಪಿಜಣ-ಅಕ್ಕಣಿ ಇವರುಗಳ ಬದುಕಿನ ಕ್ರಮವು ಈ ರೀತಿಯಾಗಿತ್ತು ಎಂಬುದನ್ನು ಗುರ್ತಿಸಬಹುದಾಗಿದೆ.

ಕೋಣೂರು ರಂಗಪ್ಪಗೌಡರ ಆಳಗಳಲ್ಲಿ ಒಬ್ಬನಾಗಿ ಚೀಂಕ್ರ ಕಾಣಿಸಿಕೊಳ್ಳುತ್ತಾನೆ. ಇಡೀ ಕಾದಂಬರಿಯಲ್ಲಿ ಸಂಕೀರ್ಣವೇ ಇಲ್ಲದ ಪಾತ್ರವಾಗಿ ಈತನನ್ನು ನಾವು ಗುರ್ತಿಸಬಹುದಾಗಿದೆ. ಚೀಂಕ್ರನು ನೀಡುವಂತಹ ಹಿಂಸೆಗೆ ದೇಯಿಯೂ ಒಳಗಾಗುತ್ತಾಳೆ. ಚೀಂಕ್ರ ಎಂತಹ ಕ್ರೂರಿ ಎಂದರೆ ಒಟ್ಟಾರೆ ಆರು ಮಕ್ಕಳನ್ನು ಹೆತ್ತಿದಂತಹ ದೇಯಿಯನ್ನು, ಏಳನೆಯ ಬಸಿರಿಯಲ್ಲಿಯೂ ಕೂಡ ಚೀಂಕ್ರನು ತನ್ನ ಲೈಂಗಿಕ ಬಲಾತ್ಕಾರದಿಂದಾಗಿ ಗರ್ಭಸ್ರಾವವು ಅಧಿಕವಾಗಿ ಕೊನೆಗೂ ಆಕೆ ಸಾವಿಗೀಡಾಗುವಂತೆ ಮಾಡುತ್ತಾನೆ. ಪಿಜಣನ ಸಾವಿಗೂ ಸಹ ತಂತ್ರ ಹೂಡುವಂತಹ ವ್ಯಕ್ತಿಯಾಗಿ ಚೀಂಕ್ರ ಕಾಣಿಸಿಕೊಳ್ಳುತ್ತಾನೆ. ಇದೇ ಮನೆತನದಲ್ಲಿ ದುಡಿಯುವಂತಹ ಪಿಜಣ ಸದಾಕಾಲ ಅನಾರೋಗ್ಯದಿಂದ ನರಳುವಂತಹ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಈತನ ಜೀವನಕ್ರಮ ನಿಜವಾಗಿಯೂ ಮನಸ್ಸನ್ನು ಕದಡುವಂತಹುದಾಗಿದೆ, ತನ್ನ ದೈಹಿಕ ಅಸಹಾಯಕತೆಯಿಂದಾಗಿ ಆತ ತನ್ನ ಪತ್ನಿಯನ್ನು ಪರೋಕ್ಷವಾಗಿ ಸಂತೋಷ ಪಡಿಸುವ ಸಲುವಾಗಿ ತಾನೇ ಸ್ವತಃ

ಆತ್ಮಹತ್ಯೆಗೆ ಶರಣಾಗುತ್ತಾನೆ ಗಂಡನ ಮೇಲೆ ಅಪಾರವಾದ ಪ್ರೀತಿಯಿರುವಂತಹ ಪಿಜಣೆಯೂ ಚೀಂಕ್ರನ ಲೈಂಗಿಕತೆಗೆ ಆಕರ್ಷಿತಳಾದರೂ ಸಹ ತನ್ನ ಪತಿಯ ಪ್ರೀತಿಯಿಂದಾಗಿ ದೇಯಿಯ ಮಕ್ಕಳನ್ನು ಸಾಕುವ ಸಲುವಾಗಿ ಮುಂದಾಗುತ್ತಾಳೆ. ಈ ರೀತಿಯಾಗಿ ಪಿಜಣನ ತ್ಯಾಗದ ಗುಣವನ್ನು ಮತ್ತು ಪಿಜಣೆಯ ಅಸಹಾಯಕತೆಯನ್ನು ನಾವು ಈ ಕಾದಂಬರಿಯಲ್ಲಿ ಗ್ರಹಿಸಬಹುದಾಗಿದೆ.

ಐತ ಮತ್ತು ಪೀಂಚಲು ಇವರು ಸಹ ಗಟ್ಟದ ಕೆಳಗಿನವರು ಇವರನ್ನು ಕುವೆಂಪುರವರು ತಮ್ಮ ಕಾದಂಬರಿಯಲ್ಲಿ ಮಲೆಗಳಲ್ಲಿನ ಮದುಮಕ್ಕಳಾಗಿ ಗುರ್ತಿಸುತ್ತಾರೆ. ಮುಕುಂದಯ್ಯನ ಪ್ರೇಯಸಿಯಾದ ಚಿನ್ನಮ್ಮಳನ್ನು ಕರೆತರುವ ಮೂಲಕ ಇವರಿಬ್ಬರ ಮಿಲನಕ್ಕೆ ಸಂಪೂರ್ಣವಾದ ಸಹಕಾರವನ್ನು ನೀಡುವಂಥವರಾಗಿ ಕಾಣುತ್ತಾರೆ ಮತ್ತು ಗುತ್ತಿಯ ಪ್ರೇಯಸಿಯಾದ ತಿಮ್ಮಿಯನ್ನು ಸಹ ಒಂದು ಗೂಡಿಸುವಲ್ಲಿ ಪಡುವಂತಹ ಪ್ರಯತ್ನದ ಮೂಲಕ ಎಲ್ಲರ ಮನಸ್ಸನ್ನು ತಮ್ಮ ಕಡೆಗೆ ಸೆಳೆಯುವಂತೆ ಕುವೆಂಪುರವರು ಇವರ ಪಾತ್ರಗಳನ್ನು ಕಾದಂಬರಿಯಲ್ಲಿ ಚಿತ್ರಿಸಿರುತ್ತಾರೆ.

ಸಿಂಭಾವಿ ಭರಮೈ ಹೆಗ್ಗಡೆಯ ಜೀತದಾಳು ಹೊಲೆಯರಾಗಿ ಗುತ್ತಿಯನ್ನು ನೋಡಬಹುದು. ಈತ ಬೆಟ್ಟಳಿಯ ತಿಮ್ಮಿಯನ್ನು ಪಡೆಯುವ ಸಲುವಾಗಿ ಹೋರಾಟವನ್ನು ಮಾಡುವ ಮೂಲಕ ಜೀವನವನ್ನು ಸಾಗಿಸುತ್ತಿದ್ದನು. ತುಂಗಾತೀರದ  ವೆಂಕಪ್ಪ ಅಗ್ರಹಾರದ ಜೋಯಿಸರಾಗಿದ್ದು ಮಲೆನಾಡಿನ ಜನರ ಮೌಢ್ಯವೇ ಇವರ ಬದುಕಿಗೆ ಬಂಡವಾಳವಾಗಿತ್ತು. ಇವರ ಬಹಳ ಪ್ರಮುಖವಾದಂತಹ ಕಸುಬು ಎಂದರೆ ದೇವಸ್ಥಾನದ ಪೂಜೆಯಾಗಿತ್ತು. ಅಂತಿಮವಾಗಿ ಅಲ್ಲಿ ಇಂಥ ಮೌಢ್ಯತೆಯನ್ನು ತೊಡೆಯಲು ಹೋದ ಹೂವಯ್ಯ ಹೇಗೆ ಬಲಿಯಾಗುತ್ತಾನೆ ಎಂಬುದನ್ನು ಇಲ್ಲಿ ಗ್ರಹಿಸಬಹುದಾಗಿದೆ. ಸೀತೆಯನ್ನು ಹೂವಯ್ಯನಿಗೆ ಕೊಡುವುದನ್ನು ತಪ್ಪಿಸುವ ಮೂಲಕ ಜೋಯಿಸ ರಾಮಯ್ಯನ ಜೊತೆ ಮದುವೆ ಮಾಡಿಸುತ್ತಾರೆ. ಸೀತೆಗೆ ದೆವ್ವ ಬಿಡಿಸಲು ನಾನಾ ವಿಧವಾದ ಕ್ರೂರ ತಂತ್ರಗಳನ್ನು ಇವರು ಬಳಸುತ್ತಾರೆ ಎಂಬುದನ್ನು ನೋಡಬಹುದು.

ಜೀವರತ್ನಯ್ಯನವರು ಪಾದ್ರಿಯಾಗಿ ಮಲೆನಾಡನ್ನು ಪ್ರವೇಶಿಸುತ್ತಾರೆ. ಇವರು ಕ್ರೈಸ್ತ ಧರ್ಮದ ಪ್ರಚಾರವನ್ನು ಮಾಡುವ ಮುಖಾಂತರ ಸ್ಥಳೀಯರನ್ನು ಆಕರ್ಷಿಸುವ ಪ್ರಯತ್ನವನ್ನು ಮಾಡಿದರು. ನೂತನವಾಗಿ ಕಾಫಿಮಡಿಯ ಪರಿಚಯವನ್ನು ಮಾಡಿಸುತ್ತಾರೆ. ನಿಧಾನವಾಗಿ

ಆಯಾಯ ಸ್ಥಳೀಯತೆಯ ಜನರು ನೂತನವಾದಂತಹ ವಿಚಾರಗಳನ್ನು ವಿರೋಧಿಸುವ ಮೂಲಕವೆ ನಿಧಾನವಾಗಿ ಅದನ್ನು ಸ್ಥಳೀಯತೆಗೆ ಒಗ್ಗಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ.

ಹೂವಯ್ಯ ಸೀತೆಯನ್ನು ಪ್ರೀತಿಸುವುದು ಕಾದಂಬರಿಯಲ್ಲಿ ಒಡಮೂಡಿ ಬಂದರೂ ಸಹ ಮೊದಲಿಗೆ ಹೂವಯ್ಯ ತನ್ನನ್ನು ತಾನು ಬದಲಾಯಿಸಿಕೊಳ್ಳದೇ ಸ್ಥಳೀಯರನ್ನು ಬದಲಾಯಿಸುವ ಪ್ರಯತ್ನವನ್ನು ಮಾಡುತ್ತಾನೆ, ಆದರೆ ಸೀತೆ ಮಾತ್ರ ಬದಲಾಗುವುದನ್ನು ನಾವು ಗಮನಿಸಬಹುದು. ನಾಗರಿಕ ಪ್ರಭಾವಕ್ಕೆ ಒಳಗಾದ ಹೂವಯ್ಯ ವರ್ಡ್ಸ್‌ವರ್ತ್, ಅರ್ನಾಲ್ಡ್, ಬುದ್ಧ, ಗಾಂಧಿ ಇವರ ವಿಚಾರ ಧಾರೆಗಳಿಂದ ಪ್ರಭಾವಿತನಾಗಿ, ಅವುಗಳ ಪ್ರೇರಣೆಯಿಂದ ತಾನೂ ಬಯಸಿದ ಹಾಗೆ ಸ್ಥಳೀಯರಲ್ಲಿ "ಅನ್ಯ"ನಾಗಿ ಹೊರ ಉಳಿಯುವ ಮೂಲಕ, ಅಲ್ಲಿನ ಪರಿಸರವನ್ನು ಸ್ವಲ್ಪ ಭಿನ್ನವಾಗಿಯೇ ಗ್ರಹಿಸುವ ಪ್ರಯತ್ನದಲ್ಲಿ ವಿಫಲನಾಗುತ್ತಾನೆ.

ಶಿವರಾಮಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ನಾವು ಪಾರೋತಿಯೂ ತನ್ನ ಮೇಲೆ ಆಗುವಂತಹ ಎಲ್ಲಾ ರೀತಿಯಾದಂತಹ ಹಿಂಸೆಯನ್ನು ಸ್ವೀಕರಿಸುವ ಮೂಲಕ ಇದ್ದಂತಹ ಸಂಪ್ರದಾಯವನ್ನು ಸ್ಥಳೀಯತೆಗೆ ಅನುಗುಣವಾಗಿ ಯಥಾವತ್ ಸ್ವೀಕರಿಸುತ್ತಾಳೆ. ರಾಮ ಐತಾಳರನ್ನು ಕಾರಂತರು ಪುರುಷ ಪ್ರಧಾನ್ಯತೆಯ ನೆಲೆಯಿಂದ ವರ್ಣಿಸಿರುತ್ತಾರೆ. ಆದರೆ ಪಾರೋತಿಯೂ ಯಾವುದೇ ರೀತಿಯಾದಂತಹ ಮರು ಮಾತನ್ನು ಸಹ ಆಡದೇ ಸ್ಥಳೀಯತೆಗೆ ತನ್ನ ಜೀವನ ಕ್ರಮವನ್ನು ಸಾಗಿಸುವವಳಾಗಿ ಕಂಡು ಬರುತ್ತಾಳೆ. ಮತ್ತೊಂದೆಡೆಯಲ್ಲಿ ಸರಸೋತಿಯು ತನ್ನ ಧೈರ್ಯ ಸಾಮರ್ಥ್ಯದ ಮೂಲಕ ತಾನು ಪಟ್ಟು ಹಿಡಿದಂತಹ ಕಾರ್ಯವನ್ನು ಮಾಡಿಯೇತೀರುತ್ತಾಳೆ. ಇನ್ನೊಂದೆಡೆಯಲ್ಲಿ ನಾಗವೇಣಿಯಾದರೂ ಇವರಿಬ್ಬರಿಗಿಂತಲೂ ಭಿನ್ನವಾಗಿ ನವ ನಾಗರೀಕತೆಗೆ ಮೊರೆ ಹೋಗುವುದನ್ನು ಕಾಣುತ್ತೇವೆ. ಮೊದಲಿಗೆ ರಾಮ ಐತಾಳರು ಜೋಯಿಸರಾಗಿದ್ದು ಬ್ರಾಹ್ಮಣವರ್ಗದವರಾಗಿ ಕಂಡು ಬರುತ್ತಾರೆ. ಅವರ ಮುಖ್ಯ ಕಸುಬು ಜ್ಯೋತಿಷ್ಯ, ಪೂಜಾ ಸಮಾರಂಭಗಳಲ್ಲಿ ಪಾಲ್ಗೊಳ್ಳುವ ಮೂಲಕ ತನ್ನ ಜೀವನವನ್ನು ಸಾಗಿಸುತ್ತಾರೆ.

**ಆಹಾರ ಪದ್ಧತಿ**

ಆಯಾಯ ಪರಿಸರಕ್ಕೆ ಸಂಬಂಧಿಸಿದಂತೆಯೇ ಆಹಾರ ಪದ್ಧತಿಯೂ ಇತ್ತು. ಒಳಹೊಕ್ಕು ನೋಡಿದಾಗ ಎರಡು ಕಾದಂಬರಿಗಳಲ್ಲಿ ಚಿತ್ರಿತವಾದಂತೆ ಮಲೆನಾಡಿನಲ್ಲಿ ಮುಖ್ಯವಾಗಿ

ಹೊಲೆಯರು ಹಂದಿ ಮಾಂಸದ ಆಹಾರವನ್ನು ಹೆಚ್ಚಾಗಿ ಸೇವಿಸುತ್ತಿದ್ದರು. ಕಾರಣ ಮುಖ್ಯವಾಗಿ ಅಲ್ಲಿನ ಸ್ಥಳೀಯರು ಹಂದಿಯನ್ನು ಬೇಟೆಯಾಡುವುದು ಮತ್ತು ಮೀನು ಶಿಕಾರಿ ಆಡುವುದು ಪ್ರಮುಖವಾಗಿರುತ್ತದೆ. ಹೆಂಡದ ಸೇವನೆಯನ್ನು ಅಧಿಕಾರವರ್ಗ, ಅಧಿಕಾರತ್ವದ ವರ್ಗಗಳು ಸೇವಿಸುವುದನ್ನು ಕಾಣಬಹುದಿತ್ತು. ಕಡುಬು, ಚಟ್ನಿಗಳ ಬಳಕೆಯೂ ಸಹ ಇದ್ದಿತ್ತು. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಪುರೋಹಿತಶಾಹಿ ವರ್ಗವು ಸಾಮಾನ್ಯವಾಗಿ ಅನ್ನದ ಗಂಜಿ, ಮಾವಿನಕಾಯಿಯ ಉಪ್ಪಿನಕಾಯಿ (ಮಿಡಿ ಉಪ್ಪಿನಕಾಯಿ)ಗಳನ್ನು ಬಳಸುತ್ತಿದ್ದರು.

<u>ಭೌಗೋಳಿಕ ವಿವರ</u>

'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಈ ಎರಡೂ ಕಾದಂಬರಿಗಳಲ್ಲಿ ವರ್ಷದಲ್ಲಿ ಆರು ತಿಂಗಳುಗಳ ಕಾಲ ಜಿನುಗುವ ಮಳೆಯಿಂದ ಶಿವಮೊಗ್ಗದ ಮಲೆನಾಡು ಪ್ರದೇಶವೂ ಸದಾಕಾಲ ಅಚ್ಚ-ಹಸಿರಾಗಿರುತ್ತದೆ. ಮಾನವನು ಅಲ್ಲಿನ ಪ್ರಕೃತಿಯ ನೋಟಕ್ಕೆ ಮನಸೋಲುತ್ತಾನೆ ಎಂಬುದನ್ನು ಕಾಣುತ್ತೇವೆ.

ಗುತ್ತಿಯು ಸೀತೂರು ಗುಡ್ಡಕ್ಕೆ ಪ್ರವೇಶ ಮಾಡುವಾಗ ಅಲ್ಲಿನ ಪ್ರಕೃತಿ ವರ್ಣನೆಯನ್ನು ಕುವೆಂಪುರವರು ಈ ರೀತಿಯಾಗಿ ಚಿತ್ರಿಸಿರುತ್ತಾರೆ. ಬೈಗುಗಪ್ಪಿನೊಂದಿಗೆ ಮುಗಿಲುಗಪ್ಪು ಮುಸುಕಿ ಮಿಣುಕು ಹುಳುಗಳು ಮಿನುಗು ಕಾಣ ತೊಡಗಿತ್ತು. ಜೀರುಂಡೆಗಳ ಕೂಗು ಕಿವಿಗೆ ಚಿಟ್ಟು ಹಿಡಿದಿರುವುದನ್ನು ವರ್ಣಿಸಿದ್ದಾರೆ. ಮಳೆಗಾಲದ ಆರಂಭದ ಕಾಲವಾಗಿದ್ದರೂ ಸಹ ಅಲ್ಲಿನ ಮಲೆನಾಡು ಭೀಕರವಾಗಿದ್ದು ಸಿಂಭಾವಿ, ಸೀತೂರು, ಲಕ್ಕುಂದ ಈ ಸ್ಥಳಗಳಲ್ಲಿ ಹೆಚ್ಚಾಗಿ ಇಂಬಳಗಳ ಕಾಟವು ಕಂಡು ಬರುತ್ತದೆ. ಗುಡ್ಡದ ಕಾಲುದಾರಿಯಲ್ಲಿ ಕತ್ತಲೆಯು ಬರುಬರುತ್ತಾ ಬಹಳಷ್ಟು ದಟ್ಟವಾಗುತ್ತಾ ದುಂಬಿಗಳ ಜೀರುದನಿಯೂ ಘೋರವಾಗಿರುವುದನ್ನು ಗ್ರಹಿಸಬಹುದು.

ಅಗಮ್ಯ ಸೌಂದರ್ಯರಾಶಿಯನ್ನು ಮಲೆನಾಡು ಒಳಗೊಂಡಿರುವ ಮೂಲಕ ಆ ಪರಿಸರದಲ್ಲಿನ ಸೂರ್ಯೋದಯದ ವರ್ಣನೆಯೂ ಎಲ್ಲರ ಮನಸ್ಸನ್ನು ಸೂರೆಗೊಳ್ಳುವಂತೆ ಕಂಡು ಬರುತ್ತದೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಹುಲಿಕಲ್ಲು ಶಿಖರ, ಮೇಗರವಳ್ಳಿಯ ಹೆದ್ದಾರಿ, ಕಲ್ಲೂರಿನ ಹೊಳೆ, ದೇವಸ್ಥಾನಗಳು, ಕೊಗೂರು, ಹೂವಳ್ಳಿ, ಹಳೆಮನೆ, ಸಿಂಭಾವಿ ಮೇಲಿನ ಊರುಗಳಲ್ಲಿ ಅಡಕೆ- ತೋಟಗಳು ಮುಂತಾದ ಪ್ರಾದೇಶಿಕ ವಿವರಗಳನ್ನು ಅಲ್ಲಿನ

ಸೌಂದರ್ಯ ಪ್ರಜ್ಞೆ ಭೌಗೋಳಿಕವಾಗಿ ವ್ಯಕ್ತಿಗಳ ಘಟನೆಗಳಿಗೆ ನಿರ್ದಿಷ್ಟವಾದ ಹಿನ್ನಲೆಯನ್ನು, ಅನಿವಾರ್ಯತೆಯನ್ನು ತಂದುಕೊಟ್ಟಿರುವುದು ಎಲ್ಲರ ಗಮನರ್ಹವಾದುದಾಗಿದೆ.

ಕಾರಂತರ 'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ನಾವು ಮುಖ್ಯವಾಗಿ ಹೇಗೆ ಅಲ್ಲಿಯ ಜನರು ಅಲ್ಲಿನ ಭೌಗೋಳಿಕತೆಗೆ ತಮ್ಮನ್ನು ತಾವು ಒಗ್ಗಿಸಿಕೊಂಡಿರುತ್ತಾರೆ ಎಂಬುದನ್ನು ಗ್ರಹಿಸಬಹುದಾಗಿದೆ. ಸಮುದ್ರ ದಂಡೆಯ ಪಕ್ಕದಲ್ಲಿ ದೊಡ್ಡ-ದೊಡ್ಡ ಅಲೆಗಳಿಂದಾಗಿ ಅಲ್ಲಿಯ ಕೆಲಸಕ್ಕೆ ಅಡ್ಡಿಯಾಗುತ್ತದೆ ಎಂಬುದನ್ನು ಅರಿತಿದ್ದರೂ ಕೂಡ, ಹೇಗೆ ಅವರು ಆ ಕೆಲಸವನು ನಿರ್ವಹಿಸುತ್ತಾರೆ ಎಂಬುದನ್ನು ತಿಳಿಯಬಹುದಾಗಿದೆ. ಇಲ್ಲಿ ನಾವು ಮೂರು ತಲೆಮಾರುಗಳಿಗೆ ಸಂಬಂಧಿಸಿದಂತಹ ವಿಚಾರಗಳನ್ನು ನಮ್ಮ ಗ್ರಹಿಕೆಯ ಮೂಲಕ ವಿಭಿನ್ನ ರೀತಿಯಾದಂತಹ ಸ್ತರಗಳಲ್ಲಿ ಭೌಗೋಳಿಕ ವಿಚಾರಗಳನ್ನು ಬಹಳ ಉತ್ತಮವಾಗಿ ವಿವರಿಸಿರುವುದು ಎಲ್ಲರ ಗಮನಾರ್ಹವಾದುದಾಗಿದೆ.

<u>ಸಮಾಜಶಾಸ್ತ್ರ ದೃಷ್ಠಿಕೋನ</u>

ಕಾದಂಬರಿಯು ಒಂದು ನಿರ್ದಿಷ್ಟ ಸಾಮಾಜಿಕ ಸಂದರ್ಭದಲ್ಲಿ ಸಮಾಜದ ವಿವಿಧ ವರ್ಗಗಳ ವಿರೋಧಾತ್ಮಕ ಸಂಬಂಧಗಳನ್ನು ಚಿತ್ರಿಸುತ್ತದೆ ಆದರೆ ನಿರ್ದಿಷ್ಟ ಜೀವನವನ್ನು ಸಮಗ್ರವಾಗಿ ಸೃಷ್ಠಿ ಮಾಡಲು ಯತ್ನಿಸುತ್ತದೆ. ತಿಮ್ಮಿಯ ಮದುವೆಯು ಬಚ್ಚನೊಂದಿಗೆ ಆಗಬೇಕೆಂದು ತೀರ್ಮಾನಿಸುವ ವಿಚಾರಕ್ಕೆ ವಿರುದ್ಧವಾಗಿ ಗುತ್ತಿಯು ತಿಮ್ಮಿಯನ್ನು ರಹಸ್ಯವಾಗಿ ಹಾರಿಸಿಕೊಂಡು ಹೋದಂತಹ ಸಂದರ್ಭದಲ್ಲಿ ಕೋಪಗೊಂಡಂತಹ ಕಲ್ಲೇಗೌಡರು ಅಣ್ಣನಾದ ಚಿಕ್ಕಬೀರನನ್ನು ಹೊನ್ನಾಳಿ ಸಾಬರಿಂದ ಕಂಬಕ್ಕೆ ಕಟ್ಟಿಸಿ ಹೊಡೆಸುವುದನ್ನು ನಾವು ಗಮನಿಸಬಹುದು. ಹಳೇಪೈಕದವರ ಬಗೆಗೆ ಗೌಡರು ತಾಳುವಂತಹ ಧೋರಣೆ ಇದೇ ರೀತಿಯಾಗಿ ಕಾಣಿಸಿಕೊಳ್ಳುತ್ತದೆ. ವೇದ ಕಲಿಯುವುದು ಹೇಗೆ ಸಮಾಜದಲ್ಲಿ ಶೂದ್ರರಿಗೆ ನಿಷಿದ್ಧವೋ ಹಾಗೆಯೇ ಸ್ವಂತ ಜಮೀನು ಮಾಡುವುದು ಹಳೇಪೈಕದವರಿಗೆ ನಿಷಿದ್ಧವಾಗಿತ್ತು.

ಇಲ್ಲಿ ಮುಖ್ಯವಾಗಿ ಹಲವಾರು ಸಂಬಂಧಗಳನ್ನು ಕ್ರೋಢೀಕರಿಸಿ ಅದರ ಮೂಲಕ ಮುಂದುವರಿದು ಕಾದಂಬರಿಗಳಲ್ಲಿ ಮನುಕುಲವು ಸಂದರ್ಭಕ್ಕೆ ಅನುಗುಣವಾಗಿ ಒಂದುಗೂಡಿಸುವುದನ್ನು ತಿಳಿಯಬಹುದಾಗಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಡಿಯಲ್ಲಿ ನಾವು ಮೇಲ್‌ವರ್ಗ ಮತ್ತು ಕೆಳವರ್ಗ ಅಂದರೆ ಜಾತಿಯನ್ನು ಆಧರಿಸಿ ಅಲ್ಲಿಯ ಜನರು ಹೇಗೆ ತಮ್ಮ ಜೀವನವನ್ನು ಸಾಗಿಸುತ್ತಾರೆ. ಹಾಗೆಯೇ ಗಂಡು-ಹೆಣ್ಣಿನ ವಿಚಾರಗಳನ್ನು ಸೂಕ್ಷ್ಮವಾಗಿ ಗಮನಿಸಬಹುದು ಉದಾಹರಣೆಗೆ - ಗುತ್ತಿಯು ತನ್ನ ಪ್ರೇಯಸಿಯಾದ ತಿಮ್ಮಿಯನ್ನು ಪಡೆದುಕೊಳ್ಳುವಂತಹ ಸಂದರ್ಭದಲ್ಲಿ ತಮ್ಮದೇ ಆದಂತಹ ವ್ಯವಸ್ಥೆಯನ್ನು ಮೀರಲು ಪ್ರಯತ್ನಿಸುವ ಗುತ್ತಿಗೆ ತಿಮ್ಮಿಯನ್ನು ದೊರಕಿಸಲು ಅನುವು ಮಾಡಿಕೊಡಬಾರದು ಎಂಬ ದುರಾಲೋಚನೆಯಿಂದಾಗಿ ಕಲ್ಲೇಗೌಡರು ಲಚ್ಚನಿಗೆ ತಿಮ್ಮಿಯನ್ನು ಮದುವೆ ಮಾಡಿಕೊಡಲು ಮುಂದಾಗುತ್ತಾರೆ. ಆದರೆ ಅಂತಹ ಸಂದರ್ಭದಲ್ಲಿ ತಿಮ್ಮಿಯನ್ನು ಗುತ್ತಿ ಹಾರಿಸಿಕೊಂಡು ಹೋದಂತಹ ಕಾರಣದಿಂದಾಗಿ ಹೊನ್ನಾಳ್ಳಿಯ ಹೊಡೆತದಿಂದಾಗಿ ತಿಮ್ಮಿಯ ಪರಿವಾರದವರಿಗೆ ಶಿಕ್ಷೆಯನ್ನು ಸಾಹೇಬರ ಕಡೆಯಿಂದಾಗಿ ವಿಧಿಸಲಾಯಿತು. ಇಲ್ಲಿ ಅಧಿಕಾರದಿಂದಾಗಿ ತಿಮ್ಮಿಯನ್ನು ಪಡೆಯುವಲ್ಲಿ ಪಡುವಂತಹ ಪ್ರಯತ್ನವನ್ನು ಕುವೆಂಪುರವರು ಅಲ್ಲಗಳೆಯುತ್ತಾ, ಪ್ರೀತಿಯಿಂದ ಯಾರು ಏನನ್ನಾದರೂ ಪಡೆಯಬಹುದೆಂಬುದನ್ನು ಪ್ರತಿಪಾದಿಸುತ್ತಾರೆ.

ಲಕ್ಕುಂದದ ಪುಟ್ಟನ ಅತ್ತೆ ಕಾಡಿಯೂ ಸಹ ಸೇಸಾನಾಯ್ಕನ ಸಹವಾಸದಿಂದಾಗಿ ತಾನು ಕದ್ದು ಬಸುರಾಗುತ್ತಾಳೆ. ಆದರೆ ಅಲ್ಲಿನ ಸಮಾಜವೂ ಆಕೆಯನ್ನು ಸಮಾನತೆಯಿಂದಾಗಿ ಸ್ವೀಕರಿಸುವಲ್ಲಿ ನಿರಾಕರಿಸಿದ್ದು ಸಮಾಜದಲ್ಲಿನ ಜನರ ದೃಷ್ಟಿ ಕೋನವೂ ವಿಭಿನ್ನವಾಗಿರುವುದನ್ನು ಗ್ರಹಿಸಬಹುದು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ನಾವು ನಾಗಕ್ಕ ಮತ್ತು ನಾಗತ್ತೆಯರು ಹೇಗೆ ಅಲ್ಲಿನ ಸಮಾಜಕ್ಕೆ ತಮ್ಮನ್ನು ತಾವು ಒಗ್ಗಿಸಿಕೊಳ್ಳುವ ಮೂಲಕ ಒಂದು ರೀತಿಯಾದಂತಹ ದುರಂತ ಪರಿಸ್ಥಿತಿಗೆ ಈಡಾಗುತ್ತಾರೆ ಎಂಬುದನ್ನು ಗಮನಿಸಬಹುದಾಗಿದೆ. ನಾಗತ್ತೆಯ ಕುತಂತ್ರಕ್ಕೆ ನಾಗಕ್ಕ ಮೊದಲಿಗೆ ಬಲಿಯಾದರೂ ಸಹ ಅಂತಿಮವಾಗಿ ತಾನೇ ಮಾಡಿದ ಕುತಂತ್ರಕ್ಕೆ ತಾನೇ ಕಾರಣೀ ಭೂತಳಾಗಿ ಕೊನೆಗೆ ನಾಗತ್ತೆ ನೈತಿಕವಾಗಿ ಅತ್ಯಂತ ಕೆಳಸ್ತರದ ಹೆಣ್ಣಾಗಿ ತಿರಸ್ಕಾರಕ್ಕೆ ಒಳಗಾಗುವುದು ಕೂಡ ಕೃತಿಯ ಸಾಮಾಜಿಕ ದೃಷ್ಟಿಯಿಂದ ಮಹತ್ವದ್ದಾಗುತ್ತದೆ.

ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಮುಖ್ಯವಾಗಿ, ಸಾಮಾಜಿಕ ದೃಷ್ಟಿಕೋನದ ಗ್ರಹಿಕೆಯ ಹಿನ್ನಲೆಯಲ್ಲಿ ನೋಡುವುದಾದರೆ ರಾಮಯ್ಯ ಅಧಿಕಾರಶಾಹಿಯಾಗಿ

ಕಾಣಿಸಿಕೊಳ್ಳುತ್ತಾನೆ. ಶಿವಮೊಗ್ಗದಲ್ಲಿ ತನ್ನ ವಿದ್ಯಾಭ್ಯಾಸವನ್ನು ಕೆಲವು ಕಾರಣಗಳ ಹಿನ್ನಲೆಯಲ್ಲಿ ಅರ್ಧಕ್ಕೆ ನಿಲ್ಲಿಸಿ, ಕಾನೂರಿಗೆ ಬಂದು ಅಲ್ಲಿ ತನ್ನದೇ ಆದಂತಹ ದೃಷ್ಟಿಕೋನದ (ಮನೋಧರ್ಮದ) ಮುಖಾಂತರ ಅಲ್ಲಿನ ಸ್ಥಳೀಯರಲ್ಲಿ ತನ್ನ ಸುಶಿಕ್ಷಿತತೆ ಅಧ್ಯಾತ್ಮಿಕತೆಗಳ ಮೂಲಕ ಉತ್ತಮಗೊಳಿಸಲು ಪ್ರಭಾವ ಬೀರುತ್ತಾನೆ. ಆದರೆ ಅಂತಿಮವಾಗಿ ಅಲ್ಲಿನ ಸ್ಥಳೀಯರಲ್ಲಿ ಸಮಾಜದಲ್ಲಿ ಆಗುವ ಮಾರ್ಪಾಟನ್ನು ನಾವು ಭಿನ್ನವಾಗಿಯೇ ಕಾಣುತ್ತೇವೆ. ಅಂದರೆ ಅನಾಗರೀಕತೆಯಿಂದಾಗಿ ಜನರು ನಾಗರೀಕತೆಯಡೆಗೆ ಸಾಗುವಂತಹುದನ್ನು ನಾವು ಇಲ್ಲಿ ಗಮನಿಸಬಹುದಾಗಿದೆ. ಆದರೆ ಮತ್ತೊಂದೆಡೆಯಲ್ಲಿ ತಂದೆಯ ಮಾತುಗಳಿಂದ ಪ್ರೇರೇಪಿತನಾಗಿ ಹೂವಯ್ಯ ಇಷ್ಟಪಡುವಂತಹ ಸೀತೆಯನ್ನು ತಾನು ಮದುವೆ ಮಾಡಿಕೊಳ್ಳಲು ಮುಂದಾಗುತ್ತಾನೆ ಜೊತೆಗೆ ಅಂತಿಮವಾಗಿ, ತನ್ನ ತಪ್ಪಿನ ಅರಿವು ಅವನಿಗೆ ಆದ ಕಾರಣದಿಂದಾಗಿ ದುರ್ಬಲ ಮನಸ್ಸಿನವನಾದ ರಾಮಯ್ಯನು ಸಮಾಜದಲ್ಲಿ ಜೀವನ ನಿರ್ವಹಣೆಯನ್ನು ಮಾಡಲು ಅಸಹಾಯಕನಾಗುವ ಮುಖೇನ ಒಂದು ದೃಷ್ಟಿಯಲ್ಲಿ ತಾನು ಗೆದ್ದವನಂತೆ, ಕಂಡರೂ ಕೂಡ ಮತ್ತೊಂದು ನೆಲೆಯಲ್ಲಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಮೂಲಕ ಯಾವರೀತಿ ದಮನೀಯ ದುರಂತದ ಸೋಲಿಗೆ ಒಳಗಾಗುತ್ತಾನೆ ಎಂದು ನೋಡಬಹುದಾಗಿದೆ. ಇದೆಲ್ಲದರ ಮೇಲೆ ಸ್ಪಷ್ಟವಾಗಿ ವಸಾಹತುಶಾಹಿಯ ಕರಿನೆರಳು ಇದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಸಮಾಜದಲ್ಲಿ ಬಹಳಷ್ಟು ಪರಿಣಾಮವನ್ನು ಬೀರಿದ ವ್ಯಕ್ತಿಯಾಗಿ ನಾವು ಜೋಯಿಸರಾದ ವೆಂಕಪ್ಪನವರನ್ನು ಕಾಣಬಹುದಾಗಿದೆ. ಜನರ ಮೌಢ್ಯತೆಯನ್ನು ಹೆಚ್ಚಿಸುವ ರೀತಿಯಲ್ಲಿ ಬದುಕುತ್ತಿದ್ದು ವೆಂಕಪ್ಪನ ಸಂಪೂರ್ಣವಾಗಿ ಆ ಮೌಢ್ಯತೆಯನ್ನು ತನ್ನ ಬದುಕಿನ ಬಂಡವಾಳವನ್ನಾಗಿ ಮಾಡಿಕೊಂಡಿರುತ್ತಾನೆ ಆದರೆ ಹೂವಯ್ಯನು ಅಲ್ಲಿನ ಸ್ಥಳೀಯರಿಗೆ ವಸಾಹತುಪ್ರಜ್ಞೆಯ ಮೂಲಕ ನಾಗರೀಕತೆಯ ಪರಿಚಯವನ್ನು ಮಾಡುವ ಪ್ರಯತ್ನದಿಂದಾಗಿ ತಾನು ತನಗೇ ಪರಕೀಯನಾಗಿ, ಹೊರಗಿನವನಾಗಿ ನಿಂತು ಸಮಾಜವನ್ನು ವೀಕ್ಷಿಸುತ್ತಾನೆ ಇದು ವೆಂಕಪ್ಪಜೋಯಿಸರಿಗೆ ಅಪ್ರಿಯ ಮಾತ್ರವಲ್ಲ, ಅದರ ವಿರುದ್ಧ ಸಾರಿದ ಯುದ್ಧದಲ್ಲಿ ನೇರವಾಗಿ ತೊಡಗಲಾಗದ ಜೋಯಿಸರಾದ ವೆಂಕಪ್ಪನವರ ಕುತಂತ್ರಕ್ಕೆ ಒಳಗಾಗುವ ಹೂವಯ್ಯ ತನ್ನ ಪ್ರೇಯಸಿಯಾದ ಸೀತೆಯಿಂದ ದೂರ ಉಳಿಯ ಬೇಕಾಗುತ್ತದೆ. ಈ ಎಲ್ಲ ಅಂಶಗಳನ್ನು ನಾವು ಸ್ಥೂಲವಾಗಿ ಸ್ಥಳೀಯತೆ ವರ್ಸಸ್ ವಸಾಹತುಶಾಹಿಯಾಗಿ ನೋಡಬೇಕಾಗುತ್ತದೆ.

ಕಾರಂತರ 'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ನಾವು ಮೂರು ತಲೆಮಾರುಗಳ ಕಥೆಯೂ ಹೇಗೆ ಒಂದೊಂದು ತಲೆಮಾರಿನಲ್ಲಿಯೂ ಕೂಡ ವಿಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ಎಂಬುದನ್ನು ಗ್ರಹಿಸಬಹುದಾಗಿದೆ. ಇದರ ಮೇಲೂ ವಸಾಹತುಶಾಹಿ ನೆರಳಿದೆ. ರಾಮ ಐತಾಳ, ಲಚ್ಚ ಮತ್ತು ರಾಮು ಇವರುಗಳ ಜೀವನ ಕ್ರಮಗಳು ಹೇಗೆ ಒಬ್ಬರಿಗಿಂತ ಮತ್ತೊಬ್ಬರಲ್ಲಿ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ ಎಂಬುದನ್ನು ಕಾರಂತರು ಬಹಳ ಉತ್ತಮವಗಿ ವ್ಯಕ್ತ ಪಡಿಸಿರುತ್ತಾರೆ.

ಕಾರಂತರು ತಮ್ಮ ಕಾದಂಬರಿಯಲ್ಲಿ ವಸಾಹತುಪ್ರಜ್ಞೆಯ ಸ್ವೀಕಾರದಿಂದಾಗಿ ಜೀವನದಲ್ಲಿ ಬರುವಂತಹ ಒಳಿತು-ಕೆಡಕುಗಳನ್ನು ಹೇಗೆ ಎದುರಿಸಲಾಯಿತು ಎಂಬುದನ್ನು ಬಹಳ ಸೂಕ್ಷ್ಮವಾಗಿ ವಿವಿಧ ಪಾತ್ರಗಳ ಮೂಲಕ ಕಾರಂತರು ನಮಗೆ ತಿಳಿಯಪಡಿಸಿರುತ್ತಾರೆ. ಆಯಾಯ ಸಮಾಜದಲ್ಲಿ ವಾಸವಾಗಿರುವಂತಹ ಗಂಡು ಮತ್ತು ಹೆಣ್ಣಿನ ಸಂಬಂಧವೂ ಹೇಗೆ ಆಯಾಯ ಕಾಲಘಟ್ಟಕ್ಕೆ ಅನುಗುಣವಾಗಿ ಭಿನ್ನವಾಗಿ ಕಂಡು ಬರುತ್ತದೆ ಎಂಬುದು ಮುಖ್ಯ ಆದರೆ ನಾವಿಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ರಾಮ ಐತಾಳನಿಗಿಂತ ಲಚ್ಚ ಸ್ವಲ್ಪ ಹೇಗೆ ಭಿನ್ನವಾಗಿರುತ್ತಾನೆ. ಅಂದರೆ ಲಚ್ಚ ಯಾಕೆ ದುಷ್ಟನಾಗುತ್ತಾನೆ ಅದನ್ನೇ ರಾಮನನ್ನು ಸೃಷ್ಠಿಸುವ ಮುಖೇನ ಇವನ ಮೂಲಕ ಒಂದು ಹೊಸ ಸಾಧ್ಯತೆಯನ್ನು ಹೇಗೆ ಹುಡುಕುತ್ತಾರೆ. ಲಚ್ಚ ಅನಾಗರೀಕನಾಗಿ ವರ್ತಿಸಿದರೂ ಸಹ ಸ್ವಲ್ಪ ಭಿನ್ನವಾಗಿ ಹೇಗೆ ಕಾದಂಬರಿಯಲ್ಲಿ ಒಂದು ಮುಖ್ಯ ಸಾಹಿತ್ಯವನ್ನು ಪ್ರತಿಷ್ಠಾಪಿಸಲು ಹೆಣಗುತ್ತಾರೆಂಬುದನ್ನು ಕೂಲಂಕುಷವಾಗಿ ಗ್ರಹಿಸಬಹುದಾಗಿರುತ್ತದೆ.

ಹೆಣ್ಣು ಮಕ್ಕಳ ಜೀವನದ ವಿಚಾರಕ್ಕೆ ಬಂದರೆ ರಾಮ ಐತಾಳರ ಮೊದಲ ಪತ್ನಿಯಾಗಿ ಕಾಣಿಸಿಕೊಳ್ಳುವ ಪಾರೋತಿಯೂ ತಾನು ಇರುವಂತಹ ಸಮಾಜವನ್ನು ಇರುವಂತೆಯೇ ಸ್ವೀಕರಿಸಿಕೊಳ್ಳುತ್ತಾಳೆ ಮತ್ತು ಅಲ್ಲಿನ ಸಮಾಜದಲ್ಲಿ ತನ್ನನ್ನು ತಾನು ಸಂಪ್ರದಾಯಕ್ಕೆ ಒಗ್ಗಿಸಿಕೊಳ್ಳುವ ಮೂಲಕ ಇದ್ದುದ್ದನ್ನು ಇದ್ದ ಹಾಗೆಯೇ ಸ್ವೀಕರಿಸಿಕೊಳ್ಳುವ ಮುಖೇನ ತನ್ನ ಜೀವನವನ್ನು ಸಾಗಿಸುತ್ತಾಳೆ. ಅಂದರೆ ಪುರುಷ ಪ್ರಧಾನ್ಯತೆಗೆ ಸಂಬಂಧಿಸಿದಂತೆ ಹೆಚ್ಚಿನ ಒತ್ತನ್ನು ನೀಡುತ್ತಾಳೆ ಆಕೆಯು ತನ್ನನ್ನು ಪೂರ್ತಿ ಸಂಪ್ರಾದಾಯಿಕತೆಗೆ(ಇದು ಒಂದು ರೀತಿ ಸ್ಥಳೀಯತೆಗೆ ಸಂಬಂಧಿಸಿದ್ದು) ಒಗ್ಗಿಸಿಕೊಂಡ ಕಾರಣದಿಂದಾಗಿ ತನ್ನ ಪತಿಯ ರೀತಿನೀತಿಗೆ ಮರುಪ್ರಶ್ನೆಯನ್ನು ಹಾಕದೆ ತನ್ನೆದುರೇ ಗಂಡ ಮದುವೆಯಾದ ಇನ್ನೊಂದು ಹೆಣ್ಣು ಸತ್ಯ ಭಾಮೆಯನ್ನು ಖುದ್ದಾಗಿ ಮನೆ ತುಂಬಿಸಿಕೊಳ್ಳುತ್ತಾಳೆ. ಆದರೆ ಸರಸೋತಿಯು ಅಲ್ಲಿನ ಪರಿಸರಕ್ಕೆ ತನ್ನನ್ನು ತಾನು ಒಗ್ಗಿಸಿಕೊಂಡಿದ್ದರೂ ಕೂಡ ಪ್ರಶ್ನೆಗಳನ್ನು ಕೇಳುವ ಮುಖಾಂತರ ಕೆಲವು ಸಂದರ್ಭಗಳಲ್ಲಿ

ವಿರೋಧಿಸುವ ರೀತಿಯಲ್ಲಿ ಸರೋಸತಿಯ ಪಾತ್ರ ಚಿತ್ರಣವಿದೆ ಆಕೆಯೂ ಮದುವೆಯಾದ ಸ್ವಲ್ಪ ದಿನಗಳಲ್ಲಿಯೇ ಪತಿಯನ್ನು ಕಳೆದುಕೊಳ್ಳುತ್ತಾಳೆ. ಆದರೂ ಅಲ್ಲಿನ ಸ್ಥಳೀಯತೆಗೆ ತನ್ನನ್ನು ಒಗ್ಗಿಸಿಕೊಂಡವಳಾಗಿ ಕಂಡು ಬಂದರೂ ಸಹ ಆಕೆಯ ಛಲ ಅಥವಾ ಧೈರ್ಯ ಎಂಬುದು ಅಗಾಧವಾದುದು ಉದಾಹರಣೆಗೆ ಹೇಳುವುದಾದರೆ ಸಮುದ್ರಕ್ಕೆ ಅಭಿಮುಖವಾಗಿ, ಈಜುವ ಮುಖೇನ ಅಲ್ಲಿರುವಂತಹ ದಿಮ್ಮಿಗಳನ್ನು ತರುವುದು ಮತ್ತು ತಾನಿದ್ದ ಪರಿಸರದಲ್ಲಿ ಅಗತ್ಯವಾದ ಎಲ್ಲಾ ರೀತಿಯಾದಂತಹ ಕೆಲಸ-ಕಾರ್ಯಗಳನ್ನು ಎದೆಗುಂದದೆ ಮಾಡುತ್ತಾಳೆ. ಆದರೆ ಆಕೆಯೂ ವಸಾಹತುಪ್ರಜ್ಞೆಯನ್ನು ತನ್ನದಾಗಿಸಿ ಕೊಳ್ಳುವಲ್ಲಿ ಸ್ವಲ್ಪ ಹಿನ್ನಡೆದಿರುವಂತೆ ಕಾಣುತ್ತದೆ.

ಕಾರಂತರು ಆಧುನಿಕತೆಯ ಕಡೆ ಮುನ್ನಡೆಯುವಂತೆ ನಾಗವೇಣಿಯನ್ನು ಚಿತ್ರಿಸಿರುತ್ತಾರೆ. ಜೀವನದ ಹಾದಿಯುದ್ದಕ್ಕೂ ಕಂಡುಬರುವಂತಹ ಎಲ್ಲಾ ರೀತಿಯಾದಂತಹ ಕಷ್ಟ-ಸುಖಗಳನ್ನು ಎದುರಿಸುವ ಮುಖೇನ ಜೀವನದಲ್ಲಿ ಅಂತಿಮವಾಗಿ ಯಶಸ್ಸನ್ನು ಪಡೆಯಲು ಆಕೆ ಮುಂದಾಗುತ್ತಾಳೆ ಎಂಬುದನ್ನು ಕಾರಂತರು ಚಿತ್ರಿಸಿರುತ್ತಾರೆ. ತನ್ನ ಶಕ್ತಿ ಸಾಮರ್ಥ್ಯಗಳ ಮುಖೇನ ನವನಾಗರೀಕತೆಯ ಕಡೆ ಹೆಜ್ಜೆಯನ್ನಿಡುತ್ತ ತನ್ನ ಮಗನಾದ ರಾಮುವಿನ ಮುಖಾಂತರ ತನ್ನ ಬದುಕಿನಲ್ಲಿ ಕಳೆದುಕೊಂಡಿದ್ದ ಪ್ರೀತಿ, ವಿಶ್ವಾಸವನ್ನು ಗಳಿಸುತ್ತಾಳೆ. ಒಮ್ಮೆ ತಾನು ಕಳೆದುಕೊಂಡಿದ್ದಂತಹ ಆಸ್ತಿಗಳನ್ನು ಪುನಃ ಪಡೆಯುವ ಮೂಲಕ 'ಮರಳಿ ಮಣ್ಣಿಗೆ' ಮರಳುತ್ತಾರೆ ಎನ್ನುವಂತಹ ಸೂಕ್ತವಾದ ಕಾದಂಬರಿಯ ಹೆಸರನ್ನು ನಿರೂಪಕ ಸೂಚಿಸಿರುವುದು ಎಲ್ಲರ ಗಮನರ್ಹವಾದುದಾಗಿದೆ.

ವಸಾಹತುಶಾಹಿಯ ಫಲವಾಗಿ ಒಡಮೂಡಿ ಬಂದಂತಹ ಆಧುನಿಕ ಶಿಕ್ಷಣವೂ ಇದರಿಂದಾಗಿ ಶಿಕ್ಷಣ ತಂದ ಹೊಸ ವಿಚಾರ, ವಿಕಾರ, ವಿಕೃತಿಗಳನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ. ಕಾದಂಬರಿಯಲ್ಲಿ ಮುಖ್ಯವಾಗಿ ಆತ್ಮವಿಮರ್ಶೆ ಮತ್ತು ಹೊಸ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆ ಕಾಣಿಸಿಕೊಳ್ಳುತ್ತದೆ. ಅಂದರೆ ನವನಾಗರೀಕತೆಗೆ ಮಾರುಹೋದಂತಹ ಅಂಶಗಳನ್ನು ನಾವಿಲ್ಲಿ ನೋಡಬಹುದಾಗಿದೆ. ಕಾಲಾಂತರದಲ್ಲಿ ಸ್ಥಳೀಯತೆಯಲ್ಲಿ ಜನರ ಬದುಕಿನ ಕ್ರಮವೂ ಹೇಗೆ ಭಿನ್ನವಾಗುತ್ತದೆಂಬುದನ್ನು ಚಿತ್ರಿಸಲಾಗಿದೆ. ಕಾರಂತರು 'ಮರಳಿ ಮಣ್ಣಿಗೆ' ಎನ್ನುವ ವಿಚಾರವನ್ನು ಈ ಮೂಲಕ ಎಲ್ಲರ ಮನಮುಟ್ಟುವಂತೆ ಮಾಡಿರುತ್ತಾರೆ.

# ಅಧ್ಯಾಯ - 4

## ವಸಾಹತುಪ್ರಜ್ಞೆ ಮತ್ತು ಸ್ಥಳೀಯತೆಯನ್ನು ರೂಢಿಸಿಕೊಂಡ ಕ್ರಮ

ಹತ್ತೊಂಭತ್ತು ಮತ್ತು ಇಪ್ಪತ್ತನೇ ಶತಮಾನದ ಕಾಲವು ಭಾರತದ ಚರಿತ್ರೆಯಲ್ಲಿ ಮಹತ್ತರವಾದದಾಗಿತ್ತು. ಭಾರತಕ್ಕೆ ಹೊರಗಿನ ಶಕ್ತಿಗಳು ಒಂದು ಸಾಂಸ್ಕೃತಿಕ ಬದುಕನ್ನು ಅನೇಕ ಸ್ಥಿತ್ಯಂತರ ಒಳಪಡಿಸಿತ್ತು. ಅಂದರೆ ಹೊರಗಿನ ವಿಚಾರ ಧಾರೆಗಳು ನಮ್ಮನ್ನು ಆಕ್ರಮಿಸಿಕೊಳ್ಳಲು ಮಾಡಿದ ಪ್ರಯತ್ನದ ಮೂಲಕ ಭಾರತೀಯರ ಜೀವನವನ್ನು ಒಂದು ಬಗೆಯ ಆಧುನಿಕ ವಿಲಕ್ಷಣಗಳಿಗೆ ಮತ್ತು ತಲ್ಲಣಗಳಿಗೆ ಗುರಿಪಡಿಸಿತ್ತು.

'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡಿತಿ' ಮತ್ತು ಕಾರಂತರ 'ಮರಳಿಮಣ್ಣಿಗೆ' ಕಾದಂಬರಿಗಳನ್ನು ನಾವು ಒಳಹೊಕ್ಕು ನೋಡಿದಾಗ ನಮಗೆ ವಸಾಹತುಪ್ರಜ್ಞೆ ಎಂಬುದು ದಕ್ಷಿಣದ ಮುಖೇನ ಹರಿದು ಬಂದು ಸ್ಥಳೀಯರ ಮೇಲೆ ಯಾವ ರೀತಿಯಾದಂತಹ ಪ್ರಭಾವವನ್ನು ಬೀರಿತ್ತು ಅದರಿಂದಾದ ಮಾರ್ಪಾಟುಗಳನ್ನು ಒಟ್ಟಾರೆಯಾಗಿ ವಸಾಹತುಪ್ರಜ್ಞೆ ಮತ್ತು ಸ್ಥಳೀಯತೆಗಳ ಮುಖಾಮುಖಿ ಮತ್ತು ಅದರಿಂದಾದ ಸಾಂಸ್ಕೃತಿಕ ಪಲ್ಲಟ ಇವುಗಳ ಸ್ವರೂಪ ಕಂಡು ಬರುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಸಮಾಜದ ಕೀಳುಸ್ತರಕ್ಕೆ ಸೇರಿದಂತಹ ಹಾಗೂ ಭೌದ್ಧಿಕವಾಗಿ ಕೆಳ ಮಟ್ಟದವನಾದ ನಾಯಿಗುತ್ತಿಯ ಪ್ರಯಾಣದಿಂದಾಗಿ ಆರಂಭಗೊಳ್ಳುತ್ತದೆ. ಆದರೆ 'ಕಾನೂರುಹೆಗ್ಗಡಿತಿ' ಹೂವಯ್ಯನವರ ಪಾತ್ರ ಮತ್ತು 'ಮಲೆಗಳಲ್ಲಿ ಮದುಮಗಳು' ಪಾತ್ರಗಳು ಕಾದಂಬರಿಯಲ್ಲಿನ ಧೋರಣೆಗಳನ್ನು ನಿಯಂತ್ರಿಸುತ್ತಾನೆ ಎಂಬುದನ್ನು ಗ್ರಹಿಸಬಹುದಾಗಿದೆ.

'ಕಾನೂರುಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳೆರಡೂ ಸಹ ಪ್ರಾದೇಶಿಕ ನಿಲುವನ್ನು ಪಡೆದಿರುತ್ತವೆ. ಇವುಗಳಲ್ಲಿನ ಪಾತ್ರ ರಚನೆಯ ವೈವಿಧ್ಯ ಅದ್ಭುತವಾದ ವಾಸ್ತವತೆ ಮತ್ತು ನಿಸರ್ಗ ವರ್ಣನೆಯನ್ನು ಕುವೆಂಪುರವರು ನೀಡಿರುತ್ತಾರೆ. ಇಲ್ಲಿ ನಾವು ಬಹಳ ಮುಖ್ಯವಾಗಿ ಮನುಷ್ಯ ಮತ್ತು ಪ್ರಕೃತಿಗಳ ಸಂಬಂಧವನ್ನು ಇದರ ಜೊತೆಗೆ ಹೊಸ

ಸಂಸ್ಕೃತಿಯನ್ನು ಪರಿಚಯಿಸುವಂತೆ ಕಾದಂಬರಿಗಳು ಮುನ್ನಡೆಯುತ್ತವೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮುಕುಂದಯ್ಯನಿಗೆ ಹೂವಯ್ಯನಲ್ಲಿರುವ ಸಂಕಲ್ಪ ಶಕ್ತಿಯಿಲ್ಲ, ಹೂವಯ್ಯನದು ತಾತ್ವಿಕ ನಿಲುವು. ಮಲೆನಾಡಿನ ಪ್ರಾಕೃತಿಕ ಸಾಂಸ್ಕೃತಿಕ ವಿವರಗಳನ್ನು ಇಲ್ಲಿ ಗ್ರಹಿಸಬಹುದು. ಮುಖ್ಯವಾಗಿ 'ಕಾನೂರು ಹೆಗ್ಗಡಿತಿ'ಯಲ್ಲಿ ದೇವರು ಮತ್ತು ಮೌಢ್ಯತೆ ಎರಡನ್ನು ನಂಬುವಂತಹ ಹಲವಾರು ಪಾತ್ರಗಳನ್ನು ಚಿತ್ರಿಸುತ್ತಾರೆ. ಆದರೆ ಮದುವೆಯಾದ ಸೀತೆಯು ಗಂಡನಾದ ರಾಮಯ್ಯನೊಡನೆ ಸಹಕರಿಸುವುದಿಲ್ಲ ಆದ ಕಾರಣ ಸೀತೆಯು ತಾನು ಮನಸಾರೆ ಪ್ರೀತಿಸಿದ ಹೂವಯ್ಯನನ್ನು ಮದುವೆಯಾಗಲಾರದೆ ಮಾನಸಿಕ ವೇದನೆಯಿಂದ ತೊಳಲಾಡುತ್ತಾ ಬಹಳ ಕಷ್ಟಗಳನ್ನು ಎದುರಿಸುತ್ತಾಳೆ. ಆಧ್ಯಾತ್ಮಿಕವಾಗಿ ಅವಳು ಸದಾಕಾಲ ಹೂವಯ್ಯನ ನೆನಪಿನಲ್ಲಿ ಜೀವನವನ್ನು ಸಾಗಿಸುತ್ತಾಳೆ.ಇದು ಸಹ ಈ ಒಂದು ಹಳೆಯದು- ಹೊಸದರ ಸಂಘರ್ಷದ ಫಲ ಎನ್ನದೆ ವಿಧಿ ಇಲ್ಲ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮುಕಂದಯ್ಯ ಯಾವುದೇ ರೀತಿಯ ಪ್ರತಿ ರೋಧವನ್ನು ತೋರ್ಪಡಿಸದೇ ಇದ್ದಂತಹ ಸ್ಥಳೀಯತೆಯನ್ನು ಹಾಗೆಯೇ ಸ್ವೀಕರಿಸುವ ಮೂಲಕ ತಾನು ತನ್ನ ಚಿನ್ನಮ್ಮಳನ್ನು ಸೇರುತ್ತಾನೆ. ಅಂದರೆ ಸಮಾಜದಲ್ಲಿ ಇರುವಂತಹ ಕಟ್ಟುಪಾಡುಗಳನ್ನು ಸ್ವೀಕರಿಸಿಕೊಂಡು ಮುನ್ನಡೆದಾಗ ಯಶಸ್ಸು ಎಂಬುದು ಹೇಗೆ ಅವನ ಕೈವಶವಾಗುತ್ತದೆ ಎಂಬುದನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ.

ಶಿವರಾಮಕಾರಂತರ 'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ಕಾರಂತರು ತಮ್ಮದೇ ದೃಷ್ಟಿಕೋನದ ಮೂಲಕ ಬದುಕನ್ನು ಪರಿಚಯಿಸುತ್ತಾರೆ. ಕಾರಂತರ ಬಹಳ ಪ್ರಮುಖವಾದ ತತ್ವವೆಂದರೆ ವೈವಿಧ್ಯಮಯವಾದ ಬದುಕಿಗೆ ಒಂದು ಒಳ್ಳೆಯ ಸಂತೋಷದ ಸಂಗತಿಯನ್ನು ಪಾತ್ರದ ಮುಖೇನ ಸೃಷ್ಟಿಸುವುದೇ ಆಗಿರುತ್ತದೆ. ಕಾರಂತರು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಕಾದಂಬರಿಯನ್ನು ಬಳಸಿಕೊಂಡಿರುವಂತಹುದು ಅತ್ಯಂತ ವಿಶೇಷಯುಕ್ತವಾಗಿದೆ ಮರಳಿಮಣ್ಣಿಗೆ ಕಾದಂಬರಿಯಲ್ಲಿ ನಾವು ಒಂದು ಕುಟುಂಬದ ವಿಚಾರದ ಗ್ರಹಿಕೆಯನ್ನು ಮೂರು ತಲೆಮಾರುಗಳ ಹಿನ್ನಲೆಯಲ್ಲಿ ಗ್ರಹಿಸಬಹುದಾಗಿದೆ ಈ ಮೂಲಕವೆ ಒಂದು ವಾಸ್ತವ ಪ್ರಪಂಚವೂ ತನ್ನ ಸಮಗ್ರವಸ್ತುವಿನ ವಿವರದಲ್ಲಿ ಮೈತಳೆಯುವುದು ಸಾಧ್ಯವಾಗುತ್ತದೆ. ರಾಮ ಐತಾಳರ ಜಿಪುಣತನ ಲಚ್ಚನ ದುಂದುಗಾರಿಕೆ ಮತ್ತು ಬೇಜವಾಬ್ದಾರಿತನದಿಂದಾಗಿ ಲಚ್ಚನಿಂದ ಯಾವುದೇ ರೀತಿಯಾದಂತಹ ಸುಖದ ಸನ್ನಿವೇಶಗಳನ್ನು ಸೃಷ್ಟಿಮಾಡದಿರುವುದು ಮತ್ತೊಂದೆಡೆ ಲಚ್ಚನ

ಮಗನಾದ ರಾಮುವಿನಿಂದ ಸುಖದ ವಾತಾವರಣವನ್ನೇ ಸೃಷ್ಟಿಯಾಗುವಿಕೆ ಇವು ಕೂಡ ತೌಲನಿಕವಾಗಿ ಮುಖ್ಯ ಅಂದರೆ ರಾಮನ ಮುಖಾಂತರ ಕಾರಂತರು ಒಂದು ಸಾಧ್ಯತೆಯನ್ನು ಹುಡುಕುತ್ತಾರೆ ಎಂಬುದು ಗ್ರಹಿಕೆಯ ಅಂಶವಾಗಿರುತ್ತದೆ. ರಾಮನು ಬದಲಾದ ಪ್ರಪಂಚದಲ್ಲಿ ಬದುಕುವವನಾಗಿ ಕಾಣಿಸಿಕೊಳ್ಳುತ್ತಾನೆ. ಜೀವನದಲ್ಲಿ ಕಂಡು ಬರುವಂತಹ ಸುಖ-ದುಃಖಗಳನ್ನು ಹೇಗೆ ಸರಿಸಮಾನವಾಗಿ ಸ್ವೀಕರಿಸಬೇಕು ಮತ್ತು ತಾಳ್ಮೆಯಿಂದ ಎದುರಿಸಿದಾಗ ಜೀವನದಲ್ಲಿ ಒಂದು ಹೊಸ ಮಾರ್ಪಾಟನ್ನು ನಾವು ಕಾಣಬಹುದಾಗಿದೆ ಎಂಬ ಸಂಗತಿಯನ್ನು ಕಾರಂತರು ಅಭಿವ್ಯಕ್ತಗೊಳಿಸಿರುತ್ತಾರೆ.

ಈಗ ಮತ್ತೆ ಕುವೆಂಪು ಅವರಲ್ಲಿಗೆ ಬರುವುದಾದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕ್ರಿಯೆಯು ಮೊದಮೊದಲು ಸಣ್ಣ ಪುಟ್ಟ ಪಾತ್ರಗಳಿಂದ ಆರಂಭವಾಗಿ ಚಿಕ್ಕ-ಚಿಕ್ಕ ತೊರೆಯಾಗಿ, ಹುಟ್ಟಿ ಮುಂದೆ ಹರಿಯುತ್ತಾ ದೊಡ್ಡ ಗಂಭೀರವಾದ ಪ್ರವಾಹವಾಗಿ ಹರಿಯುವ ಮಹಾನದಿಯಂತೆ ಮುಂದಿನ ಅಧ್ಯಯನಗಳಲ್ಲಿ ಸಮೃದ್ಧವಾದ ಜೀವನದ ವಿವರಗಳನ್ನು ತನ್ನೊಳಕ್ಕೆ ಸೇರಿಸಿಕೊಳ್ಳುತ್ತಾ, ಹರಹುಗೊಳ್ಳುತ್ತಾ ಹೋಗುತ್ತದೆ. ಪ್ರಪ್ರಥಮವಾಗಿ ಗುತ್ತಿಯನ್ನು ಪರಿಚಯಿಸುತ್ತಾ ಕಾದಂಬರಿಯು ತನ್ನ ಮುನ್ನಡೆಯನ್ನು ಸಾಗಿಸುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಸಿಂಭಾವಿ ಭರಮೈ ಹೆಗ್ಗಡೆಯ ಜೀತದಾಳು ಹೊಲೆಯರ ಗುತ್ತಿ ಬೆಟ್ಟಳ್ಳಿಯ ತಿಮ್ಮಿಯನ್ನು ಹಾರಿಸಿಕೊಂಡು ಬರಲು ಹೊರಡುವ ಯಾತ್ರೆಯಿಂದಲೇ ಕಾದಂಬರಿಯು ಪ್ರಾರಂಭವಾಗುತ್ತದೆ. ಈತ ಬಹಳಷ್ಟು ಗುಟ್ಟುಗಳನ್ನು ಬಲ್ಲವನಾಗಿದ್ದು, ತನ್ನ ಪ್ರೇಯಸಿಯಾದ ತಿಮ್ಮಿಯನ್ನು ಪಡೆಯುವಲ್ಲಿ ಯಶಸ್ವಿಯನ್ನು ಕಾಣುತ್ತಾನೆ. ಭರಮೈ ಹೆಗ್ಗಡೆಯವರು ಕೊಡುವ ಪತ್ರವನ್ನು ಹಳೆಮನೆ ಸುಬ್ಬಣ್ಣ ಹೆಗ್ಗಡೆಯವರಿಗೆ ತಲುಪಿಸುವುದು ಗುತ್ತಿಯ ಕೆಲಸವಾಗಿತ್ತು. ಸೀತೂರು ಗುಡ್ಡಕ್ಕೆ ಹೊರಡುವಂತಹ ಸಂದರ್ಭದಲ್ಲಿ ಅಲ್ಲಿನ ಪರಿಸರದ ವರ್ಣನೆಯೂ ಅದ್ಭುತವಾದುದಾಗಿದೆ. ಅಲ್ಲಿನ ಜೀರುಂಡೆಗಳ ಕೂಗು, ಮಿಣುಕು ಹುಳುಗಳ ಮಿನುಗುತ್ತವೆ. ಮಳೆಗಾಲದ ಪ್ರಾರಂಭದ ಸಮಯವಾಗಿದ್ದರೂ ಮಲೆನಾಡು ಭಯಂಕರವಾಗಿದ್ದು ಸಿಂಭಾವಿ, ಸೀತೂರು, ಲಕ್ಕುಂದ ಈ ಎಲ್ಲಾ ಸ್ಥಳಗಳಲ್ಲಿ ಇಂಬಳ ಹೆಚ್ಚಾಗಿ ಕಂಡುಬರುತ್ತವೆ. ಗುತ್ತಿಯೂ ಬೆಟ್ಟದ ದಾರಿಯಲ್ಲಿ ಹಾದುಹೋಗುವಂತಹ ಸಂದರ್ಭದಲ್ಲಿ ಇಂಬಳಗಳನ್ನು ಕಾಲಿನಿಂದ ಕಿತ್ತು ಬಿಸಾಡುತ್ತಾ ಅದೇ ಕೈಯಲ್ಲಿ ಜೇಬಿನಿಂದ ಎಲೆ-ಅಡಿಕೆಗಳನ್ನು ಹಾಕಿ ಕೊಳ್ಳುತ್ತಾ, ಹೊರಡುವಾಗ ಅಲ್ಲಿ ಕಂಡುಬರುವ ನಾಯಿಯೂ (ಹುಲಿಯ) ಗುತ್ತಿಯೊಡನೆ

ಒಡಗೂಡಿ ಸೀತೂರಿಗೆ ಹೊರಡುತ್ತಾರೆ, ತದನಂತರ ಲಕ್ಕುಂದದಲ್ಲಿ ರಾತ್ರಿಯನ್ನು ಕಳೆಯುತ್ತಾ, ನಾಗರೀಕರಿಗೆ ಭೀಕರವಾಗಿ ಕಾಣುವ ವರ್ಷಕಾಲದ ಈ ಭಯಂಕರ ಪರ್ವತಾರಣ್ಯದ ರುದ್ರ ಪ್ರಕೃತಿ ಗುತ್ತಿಗೆ ಬಹುಕಾಲದ ಪರಿಚಯದಿಂದಾಗಿ ಸಾಧಾರಣವಾಗಿತ್ತು.

ಗುತ್ತಿಯು ತನ್ನ ಮತ್ತು ಒಡೆಯರ ಕಾರ್ಯಾರ್ಥವಾಗಿ ಹೊರಟಿದ್ದನು. ಅವನ ಪ್ರಯಾಣದ ಉದ್ದೇಶ, ತನ್ನನ್ನು ಒಲಿದಿರುವ, ಆದರೆ ಪರಿಸರದ ಒತ್ತಡದಿಂದಾಗಿ ಬೇರೆಯವರನ್ನು ಮದುವೆ ಆಗಬೇಕಾಗಿ ಬಂದಿರುವ ತಿಮ್ಮಿಯನ್ನು ಪಾರು ಮಾಡುವುದು. ತಿಮ್ಮಿಯನ್ನು ವಿಷಮ ಪರಿಸ್ಥಿತಿಯಿಂದ ಪಾರುಮಾಡುವ ಪಣತೊಟ್ಟು ಧೃಡತೆಯಿಂದ ಅದನ್ನು ಸಾಧಿಸುವವನಾಗಿ ಕಂಡು ಬರುತ್ತಾನೆ. ಇದರ ಹಿನ್ನಲೆಯಲ್ಲಿ ನಾವು ಸ್ಥಳೀಯತೆಯ ವಿಚಾರವನ್ನಿಲ್ಲಿ ಗ್ರಹಿಸಬಹುದಾಗಿದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ತಾವು ಬಯಸಿದ ಹೆಣ್ಣಿಗಾಗಿ ನಿರಂತರವಾಗಿ ತೊಳಲಾಡುವ ಪುರುಷ ಪಾತ್ರಗಳ ಹೋರಾಟದ ಬದುಕನ್ನು ನಾವು ನೋಡಬಹುದಾಗಿದೆ. ಗುತ್ತಿಯ ಪ್ರಯತ್ನ ಶೀಲತೆಯನ್ನು ಕುವೆಂಪುರವರು ಓಡುಹುಳುವಿನ ಪ್ರಯತ್ನ ಶೀಲತೆ ಮತ್ತು ಧೃಡತೆಗೆ ಸಂಕೇತಿಸುತ್ತಾರೆ. ಒಮ್ಮೆ ಗುತ್ತಿ ನೆಲದ ಕಡೆ ನೋಡು-ನೋಡುತ್ತಿದ್ದ ಹಾಗೆ ರಾತ್ರಿಯ ಮಾರಿಯ ಸಮಯದಲ್ಲಿ ತೇಲಿಬಂದು ಕತ್ತುರೆಯಾದಂತಿದ್ದ ಒಂದು ಹಲಸಿನ ತರಗಿನ ನಡುವೆ ಬಿದ್ದಿದ್ದಂತಹ ಒಂದು ಸಗಣಿ ಮುದ್ದೆಯಿಂದ ಒಂದು ಓಡುಹುಳು ಸಣ್ಣದೊಂದು ಎಂಟೆಯನ್ನು ರಚಿಸಿ ಅದನ್ನು ಹಿಂದು-ಮುಂದಾಗಿ ತನ್ನ ಹಿಂಗಾಲುಗಳಿಂದ ನೂಕಿಕೊಂಡು ಹೋಗುತ್ತಿದ್ದಂತಹ ದೃಶ್ಯವು ಅವನ ಮನಸ್ಸನ್ನು ತನ್ನ ಕಡೆಗೆ ಆಕರ್ಷಿಸಿತು. ಅತ್ಯಮೂಲ್ಯವಾದಂತಹ ತನಗೆ ಬೇಕಾದಂತಹ ಪದಾರ್ಥವನ್ನು ಬಹಳಷ್ಟು ಪ್ರಯಾಸದಿಂದ ಸಾಗಿಸುವ ಸಾಹಸದಲ್ಲಿ ತೊಡಗಿದಂತಿತ್ತು ಅದರ ಪ್ರಯತ್ನ ಓಡುಹುಳು ಸ್ವಲ್ಪ ದೂರದಲ್ಲಿ ಆ ಉಂಡೆಯನ್ನು ತೆಗೆದುಕೊಂಡು ಹೋಗುವುದರಲ್ಲಿ ಸಣ್ಣ ದಿಬ್ಬದ ನೆತ್ತಿಗೆ ಬಂದೊಡನೆ ಮತ್ತೆ ಕೆಳಕ್ಕುರುಳಿತು. ಓಡುಹುಳುವು ಮತ್ತೆ-ಮತ್ತೆ ಕೆಳಕ್ಕೆ ಬಿದ್ದಂತಹ ಆ ಪದಾರ್ಥವನ್ನು ಮೇಲಕ್ಕೆ ತೆಗೆದುಕೊಂಡು ಹೋಗಲು ಎಡೆಬಿಡದೆ ಪ್ರಯತ್ನವನ್ನು ಮಾಡಿತು. ಅಂದರೆ ತನ್ನ ಕೆಲಸವನ್ನು ಧೃತಿಗೆಡದೆ ನಿರಾಶವಾಗದೆ ಪ್ರಶಾಂತವಾಗಿಯೆ ತನ್ನ ಕೆಲಸವನ್ನು ಸಾಗಿಸುತ್ತಿತ್ತು. ಇದನ್ನೇ ಗಮನಿಸುತ್ತಿದ್ದ ಗುತ್ತಿಯೂ ತನ್ನ ಮನಸ್ಸಿನಲ್ಲಿಯೂ ಕೂಡ ಹೊರ ಹಂಚಿ ಹೋದ ಧೃಡತೆಯ ವಿಚಾರವಾಗಿ ಚಿಂತಿಸುತ್ತಾ ಶ್ಲಾಘಿಸುತ್ತಲೂ ಇದ್ದನು. ಗುತ್ತಿಯ ಜೀವನದ ಸಂದರ್ಭದಲ್ಲಿ, ತಿಮ್ಮಿಯನ್ನು ವಿಷಮ ಪರಿಸ್ಥಿತಿಯಿಂದ ಪಾರುಮಾಡುವ ಆ ಮೂಲಕ ತನ್ನ ಜೀವನವನ್ನು ಸಾರ್ಥಕಮಾಡಿಕೊಳ್ಳುವ ಗುತ್ತಿಯ ಪ್ರಯತ್ನಕ್ಕೂ ಅದು ಸಂಕೇತವಾಗಿತ್ತು.

ಒಮ್ಮೆ ಬೆಟ್ಟಳ್ಳಿಯಲ್ಲಿರುವಂತಹ ಸಂದರ್ಭದಲ್ಲಿ ಪಾದ್ರಿಯಾದ, ಜೀವರತ್ನಯ್ಯನವರು ಸ್ಥಳೀಯರಿಗೆ ಪರಿಚಯ ಮಾಡಿಕೊಳ್ಳುವ ಮುಖೇನ ಬೆಟ್ಟಳ್ಳಿ ಕಲ್ಲಯ್ಯಗೌಡರ ಮಗನಾದ ದೇವಯ್ಯನವರ ಬೈಸಿಕಲ್ಲಿನ ಸವಾರಿಯನ್ನು ವೀಕ್ಷಿಸಿ ಅಲ್ಲಿ ವಸಾಹತು ಪ್ರಜ್ಞೆಯನ್ನು ಅಳವಡಿಸಿಕೊಳ್ಳುತ್ತಾನೆ. ಸಂಜೆಯ ಸಮಯದಲ್ಲಿ ತಿಮ್ಮಿಯನ್ನು ಹಾರಿಸಿಕೊಂಡು ಬರುತ್ತಾನೆ. ಆ ಸಮಯದಲ್ಲಿ ತಿಮ್ಮಿ ಮತ್ತು ಗುತ್ತಿಯ ಹುಲಿಕಲ್ಲುನೆತ್ತಿಯ ಮಂಟಪದಲ್ಲಿ ರಾತ್ರಿ ಒಟ್ಟಿಗೆ ಉಳಿಯಬೇಕಾಗಿ ಬಂದಾಗ ನಡೆದಂತಹ ಘಟನೆಯನ್ನು ನಾವು ಅಲ್ಲಿನ ಜನರ ಜೀವನ ಕ್ರಮದ ಹಿನ್ನಲೆಯಲ್ಲಿ ಸ್ಥಳೀಯತೆಗೆ ಸಂಬಂಧಿಸಿದಂತೆ ಗ್ರಹಿಸಬಹುದಾಗಿದೆ. ಗುತ್ತಿ ತಿಮ್ಮಿಯರು ಒಟ್ಟಿಗೆ ಮಲಗಿದಾಗ ನೈಸರ್ಗಿಕ ಪ್ರವೃತ್ತಿಗೆ ಒಳಗಾಗದೆ ಇದ್ದದ್ದು. ಹುಲಿಯ ಮತ್ತು ಕುರ್ಕಗಳ ಕಾದಾಟ ಕಾರಣವೇ ವಿನಾ ಅವರ ನೈತಿಕ ಪ್ರಜ್ಞೆಯಲ್ಲ ಎಂಬುದನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ. ಗುತ್ತಿ ಮತ್ತು ತಿಮ್ಮಿ ಇವರಿಬ್ಬರೂ ಮಲೆಗಳಲ್ಲಿ ಮದುಮಕ್ಕಳಾಗಿ ಮಿಂಚುತ್ತಾರೆ.

ಗುತ್ತಿಯ ಮೂಲಕವೇ ಕಾದಂಬರಿಯ ಪ್ರಮುಖ ಪಾತ್ರಗಳು ಮತ್ತು ಸನ್ನಿವೇಶಗಳು ಅನಾವರಣ ಗೊಳ್ಳುತ್ತವೆ. ಒಮ್ಮೆ ಸಾಬರೊಡನೆ ಹೊಡೆದಾಟದಿಂದ ಗುತ್ತಿಯೂ ಪೋಲಿಸರ ಕೈವಶವಾಗುತ್ತಾನೆ. ತದನಂತರದಲ್ಲಿ ಪೋಲಿಸರಿಂದ ತಪ್ಪಿಸಿಕೊಂಡು ಗುತ್ತಿಯು ಚಿನ್ನಮ್ಮ ಮತ್ತು ಮುಕುಂದಯ್ಯನನ್ನು ಸೇರಿಸುವ ಸಲುವಾಗಿ ಬಹಳಷ್ಟು ಪ್ರಯತ್ನಗಳನ್ನು ಮಾಡುತ್ತಾನೆ. ಗುತ್ತಿಯು ಕಾದಂಬರಿಯ ಇಡೀ ಕಾಲ–ದೇಶದಲ್ಲಿ ಆವರಿಸಿಕೊಳ್ಳುತ್ತಾನೆ. ಇಡೀ ಕಾದಂಬರಿಯಡಿಯಲ್ಲಿ ಸಾಕ್ಷಿಯಾಗಿಯೂ ಕಾಣಿಸಿಕೊಳ್ಳುತ್ತಾನೆ.

ಮುಕುಂದಯ್ಯ ಮತ್ತು ಚಿನ್ನಮ್ಮನವರು ಸಹ ಮಲೆಗಳಲ್ಲಿ ಮದುಮಕ್ಕಳಾಗಿ ಮಿಂಚುತ್ತಾರೆ. ಕೋಣೂರು ರಂಗಪ್ಪಗೌಡರ ತಮ್ಮನಾಗಿ ಮತ್ತು ಹೊಸ ತಲೆಮಾರಿನ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುವ ಮುಖೇನ ಕಾದಂಬರಿಯಲ್ಲಿ ತನ್ನ ಬಾಲ್ಯ ಗೆಳತಿಯಾದಂತಹ ಚಿನ್ನಮ್ಮನನ್ನು ಪಡೆಯಲು ಅಂದಿನ ಶಿಷ್ಟಾಚಾರದ ಕಟ್ಟುಪಾಡುಗಳೆಲ್ಲವನ್ನು ಮುಕುಂದಯ್ಯ ನಿರಾಕರಿಸುತ್ತಾನೆ. ಕೋಣೂರಿನ ಕಾಗಿನಹಳ್ಳಿ ಅಮ್ಮ–ದಾನಮ್ಮ ಸರಸೋತಿ ಕಿರಿಯ ಮಗನಾದ ಮುಕುಂದಯ್ಯ ಮೊದ–ಮೊದಲು ಪುರೋಹಿತ ವರ್ಗವು, ಸೃಷ್ಟಿಸಿದಂತಹ ಮೌಢ್ಯದ ವಿರುದ್ಧ ತನ್ನ ಪ್ರತಿಭಟನೆಯನ್ನು ವ್ಯಕ್ತ ಪಡಿಸುತ್ತಾನೆ. ಒಮ್ಮೆ ಪಾದ್ರಿಯಾದಂತಹ ಜೀವರತ್ನಯ್ಯನವರು ಮಲೆನಾಡಿನ ಪ್ರದೇಶದಲ್ಲಿ ಕ್ರೈಸ್ತ ಧರ್ಮಕ್ಕೆ ಸ್ಥಳೀಯ ಜನರನ್ನು ಮತಾಂತರ ಗೊಳಿಸುವ ಕಾರ್ಯವನ್ನು ಮಾಡುವ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ ಮಲೆನಾಡಿನ ಜೀವನದಲ್ಲಿ ಹಳೆಯ

ವಿದ್ಯಾಭ್ಯಾಸ ಪದ್ಧತಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ ಒಂದು ಹೊಸ ಬಗೆಯ ಶಿಕ್ಷಣ ಕ್ರಮ ಪಡೆಯುವಂತಹ ಸಂದರ್ಭದಲ್ಲಿ ಪಾದ್ರಿಯದು ಜಡ ಬುದ್ಧಿಯಾಗಿದೆ, ತುಸು ಜಾಗ್ರತ ಬುದ್ಧಿಯುಳ್ಳವರು ಹಾಗೂ ತಮ್ಮ ಧರ್ಮದ ಮೂಲತತ್ವವನ್ನರಿಯದ ಮಲೆನಾಡಿನ ಗೌಡರುಗಳನ್ನು ಮತಾಂತರಗೊಳಿಸುವುದು ಸುಲಭವೆಂದು ನಂಬಿ ಅಂಥವರನ್ನೆ ಪತ್ತೆ ಹಚ್ಚುತ್ತಾನೆ. ಅಂತಹ ಸಮಯದಲ್ಲಿ ಮೊದಲಿಗೆ ಸಿಂಧುವಳ್ಳಿ ಚಿನ್ನಪ್ಪ ಮತ್ತು ಎರಡನೇಯವರಾದ ಬೆಟ್ಟಳ್ಳಿ ದೇವಯ್ಯ ಇವರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸಿಕೊಳ್ಳುವ ಕಾರಣದಿಂದಾಗಿ ನೂತನವಾದ ಅಂದರೆ ಚಿರಪರಿಚಿತವಾದಂತಹ ವಸ್ತುಗಳಿಂದಾಗಿ ಜನರನ್ನು ಆಕರ್ಷಿಸುವ ಪ್ರಯತ್ನವನ್ನು ಮಾಡುತ್ತಾನೆ. ಪ್ರಥಮವಾಗಿ ಬೈಸಿಕಲ್ಲನ್ನು ಜನರಿಗೆ ತೋರ್ಪಡಿಸುವ ಮುಖೇನ ಅಲ್ಲಿಯ ಸ್ಥಳೀಯರನ್ನು ತನ್ನೆಡೆಗೆ ಆಕರ್ಷಿಸುತ್ತಾನೆ, ಅಂತಹ ಸಮಯದಲ್ಲಿ ಬೈಸಿಕಲ್ಲನ್ನು ಸವಾರಿ ಮಾಡುವಂತಹ ತರಬೇತಿಯನ್ನು ದೇವಯ್ಯನಿಗೆ ನೀಡುವ ಮೂಲಕ ಕ್ರೈಸ್ತಮತಕ್ಕೆ ಧರ್ಮಾಂತರ ಮಾಡಿಸಿ ಕೊಂಡಂತಹ ಸಂದರ್ಭದಲ್ಲಿ ಮುಕುಂದಯ್ಯನು ಕ್ರೈಸ್ತಮತಕ್ಕೆ ಧರ್ಮಾಂತರ ಹೊಂದ ಬೇಕಾಗಿದ್ದ ದೇವಯ್ಯನನ್ನು ಪಾರು ಮಾಡುವ ಸಂದರ್ಭವೂ ಸಹ ಚಿತ್ರಿತವಾಗಿದೆ. ಅಮೇರಿಕದಲ್ಲಿನ ವಿವೇಕಾನಂದರು ಮಿಶನರಿಗಳ ಮತಾಂತರ ಕಾರ್ಯವನ್ನು ತಮ್ಮದೇ ಆದ ದಾಸ್ಯ ವಿಧಾನವನ್ನು ಸ್ಥಳೀಯರ ಅಂದರೆ ಮುಕುಂದಯ್ಯ ಮತ್ತು ಇತರೆ ವ್ಯಕ್ತಿಗಳಿಂದಾಗಿ ವಿಫಲಗೊಳಿಸುತ್ತಾರೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮುಖ್ಯವಾಗಿ ಮುಕುಂದಯ್ಯನು ಹೂವಳ್ಳಿ ವೆಂಕಟನಾಯ್ಕ ಅಥವಾ ವೆಂಕಣ್ಣನ ಮಗಳಾದ ಚಿನ್ನಮ್ಮಳನ್ನು ತಾನು ಪ್ರೀತಿಸಿದಂತೆ ಆಕೆ ಸಹ ಅನ್ಯನೊಡನೆ ಸೇರುವ ಸಲುವಾಗಿ ಸಂಪ್ರದಾಯವನ್ನು ದಿಕ್ಕರಿಸಿ ನಡೆಯುವ ಹೆಣ್ಣಾಗಿ ಕಾಣಿಸಿಕೊಳ್ಳುತ್ತಾಳೆ. ಬದಲಾಗುತ್ತಿದ್ದ ಕಾಲಘಟ್ಟದಲ್ಲಿ ಸಾಮಾಜಿಕ ಧೋರಣೆಗಳು ಸ್ತ್ರೀಯರ ಸ್ಥಾನಮಾನವನ್ನು ಪರಿವರ್ತಿಸುವಳೆಂಬ ನೆಲೆಯಲ್ಲಿ ಅವಳನ್ನು ಚಿತ್ರಿತಳಾಗಿರುತ್ತಾಳೆ. ಈ ಮೂಲಕವಾಗಿ ಮಲೆಗಳಲ್ಲಿ ಮದುಮಕ್ಕಳಾಗಿ ಮಿಂಚುವ ಸಲುವಾಗಿ ಶಿಷ್ಟ ಸಮಾಜದ ಕಟ್ಟಳೆಗಳನ್ನು ಮೌನವಾಗಿಯೇ ಮೀರುವ ಮುಖೇನ ಈ ಇಬ್ಬರೂ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಾರೆ.

ಪಾದ್ರಿ ಜೀವರತ್ನಯ್ಯ ಸುಬ್ಬಣ್ಣ ಹೆಗ್ಗಡೆಯರ ಹತ್ತಿರ ಒಕ್ಕಲುತನ ಮಾಡುತ್ತಿದ್ದಂತಹ ಸುಬ್ಬಯ್ಯ ಶೆಟ್ಟರ ಹೆಂಡತಿ ಅಂತಕ್ಕನಿಗೆ ಮೊದ-ಮೊದಲು ಆಧುನಿಕತೆಗೆ ಸಂಬಂಧಿಸಿದಂತೆ

ಕಾಫಿಯ ಪರಿಚಯವನ್ನು ಮಾಡಿಕೊಡುತ್ತಾನೆ. ಆದರೆ ಮೊದಲು ಅಲ್ಲಿನ ಸ್ಥಳೀಯರು ನಿರಾಕರಿಸಿದರೂ ಸಹ ನಿಧಾನವಾಗಿ ಅದನ್ನು ತಮ್ಮದಾಗಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ ಅಂತಕ್ಕ ತನ್ನ ಪತಿಯ ಮರಣದ ತದನಂತರ ಮೇಗರಹಳ್ಳಿಯಲ್ಲಿ ತನ್ನ ಮಗಳನ್ನು ದೇವಯ್ಯ ಒಲಿಸಿಕೊಳ್ಳುವಂತೆ ಪ್ರೇರೇಪಿಸುತ್ತಾಳೆ. ತಾಯಿ-ಮಗಳ ಸ್ವಭಾವ ವರ್ತನೆಗಳು ಆ ಸಮಾಜದಲ್ಲಿ ವಿಲಕ್ಷಣವೆಂಬಂತೆ ತೋರಿದರೂ ಕೂಡ ಇಡೀ ಸಮಾಜವೂ ಅದನ್ನು ಸ್ವೀಕರಿಸುತ್ತದೆ, ಅವರ ವರ್ತನೆಗೆ ಇಡೀ ಕಾದಂಬರಿಯೂ ಸಮರ್ಥನೆಯನ್ನು ದೊರಕಿಸಿಕೊಡುತ್ತದೆ.

ಸಾಮಾಜಿಕ ನೀತಿಗಳನ್ನು ಉಲ್ಲಂಘಿಸುವಂತಹ ತನ್ನ ಕುತಂತ್ರದಿಂದ ಕೆಳಮಟ್ಟದ ಯೋಚನೆಗಳಿಗೆ ಇಳಿಯುವಂತಹ ರೀತಿಯಲ್ಲಿ ನಾಗಕ್ಕ ಮತ್ತು ನಾಗತ್ತೆಯನ್ನು ಕುವೆಂಪುರವರು ಚಿತ್ರಿಸಿರುತ್ತಾರೆ. ನಾಗತ್ತೆಯು ತನ್ನ ವಿಧವೆಯಾದಂತಹ ನಾಗಕ್ಕಳನ್ನು 'ಕೂಡಿಕೆ' ಮಾಡಿಸುವಲ್ಲಿ ಅನೇಕ ರೀತಿಯಾದಂತಹ ತಂತ್ರಗಳನ್ನು ಬಳಸುವ ಮೂಲಕ ತಾನು ಯಾವ ತಂತ್ರವನ್ನು ಬಯಸಿದ್ದಳೂ ಅದನ್ನು ಪೂರ್ಣಗೊಳಿಸುವಲ್ಲಿ ಯಶಸ್ವಿಯಾಗುತ್ತಾಳೆ. ಆದರೆ ತಾನು ಮಾಡಿದ ಕುತಂತ್ರಕ್ಕೆ ತಾನೇ ಬಲಿಯಾಗುತ್ತಾಳೆ ಎಂಬುದನ್ನು ಕುವೆಂಪುರವರು ಬಹಳ ಉತ್ತಮವಾಗಿ ಕಾದಂಬರಿಯಲ್ಲಿ ಚಿತ್ರಿಸಿರುತ್ತಾರೆ. ಅಂದರೆ ಅಲ್ಲಿನ ಪರಿಸ್ಥಿತಿಗೆ ತಮ್ಮನ್ನು ತಾವು ಒಗ್ಗಿಸಿಕೊಳ್ಳುವ ಮೂಲಕ ಹೇಗೆ ಅಲ್ಲಿನ ಸ್ಥಳೀಯತೆಗೆ ಪ್ರತಿಕೂಲವಾಗಿ, ನಡೆದುಕೊಳ್ಳುತ್ತಾರೆ ಎಂಬುದು ನಮ್ಮೆಲ್ಲರ ಗಮನಾರ್ಹವಾದ ವಿಷಯವಾಗಿ ಮೂಡಿ ಬರುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ನಾವು ಮುಖ್ಯವಾಗಿ ಅಲ್ಲಿನ ಮೌಢ್ಯತೆಗಳಿಗೆ ಜನರು ಮೊದ-ಮೊದಲು ಹೇಗೆ ಮಾರು ಹೋಗಿದ್ದರು ಎಂಬುದನ್ನು ಕಾಣಬಹುದಾಗಿದೆ. ನಾಗರಿಕತೆಯಿಂದ ದೂರವಾದ ಮಲೆನಾಡಿನ ಜನರಿಗೆ ತಾಯಿತ ಮಂತ್ರಿಸಿ ಕೊಡುವಂತಹ, ಗುಪ್ತ ರೋಗಗಳಿಗೆ ಔಷಧಿಯನ್ನು ಕೊಡುವಂತಹ ಮತ್ತು ಕಳ್ಳಬಸಿರು ಇಳಿಸುವುದಕ್ಕೆ ಮದ್ದುಕೊಡುತ್ತಿದ್ದರು ಇದರಿಂದಾಗಿ ನಮಗೆ ಸ್ಪಷ್ಟವಾಗಿ ತಿಳಿದುಬರುವಂತಹ ಅಂಶವೇನೆಂದರೆ ಅಲ್ಲಿನ ಜನ ಹೇಗೆ ತಮ್ಮನ್ನು ಆ ಪರಿಸರಕ್ಕೆ ಸೂಕ್ತವಾಗಿ ಒಗ್ಗಿಸಿಕೊಳ್ಳುತ್ತಾರೆ ಎಂಬುದಾಗಿದೆ.

ಮಲೆಗಳಲ್ಲಿ ಮದುಮಕ್ಕಳಾಗಿ ಐತ-ಪೀಂಚಲನ್ನು ನೋಡಬಹುದಾಗಿದೆ. ಅದರ ಜೊತೆಗೆ ಚೀಂತ್ರ-ದೇಯಿ, ಪಿಜಣ-ಅಕ್ಕಣಿ ಇವರೆಲ್ಲರೂ ಸಹ ಗಟ್ಟದ ಕೆಳಗಿಂದ ಬಂದು ಕೋಣೂರು

ರಂಗಪ್ಪಗೌಡರ ಮನೆತನದಲ್ಲಿ ಆಳಾಗಿ ದುಡಿಯುವಂತಹ ಜೋಡಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಐತ ಮತ್ತು ಪೀಂಚಲು ಇವರಿಬ್ಬರೂ ಯಾರೇ ನೋಡಿದರೂ ಅಸೂಯೆ ಪಡುವಷ್ಟರ ಮಟ್ಟಿಗೆ ಅನುರೂಪ ಮತ್ತು ಸಾಮರಸ್ಯ ದಾಂಪತ್ಯದಿಂದಾಗಿ ಜೀವನವನ್ನು ಸಾಗಿಸುತ್ತಿದ್ದರು. ಮುಕುಂದಯ್ಯ – ಚಿನ್ನಮ್ಮನವರ ಮಿಲನಕ್ಕೆ ಬಹಳಷ್ಟು ಸಹಾಯಕರಾಗಿ ಕಾಣುತ್ತಾರೆ ಹಾಗೆಯೇ ಒಮ್ಮೆ ತಿಮ್ಮಿಯ ಸಂರಕ್ಷಣೆಗೂ ಸಹ ಮುಂದಾಗುತ್ತಾರೆ ಯಾವುದೇ ರೀತಿಯಾದಂತಹ ಕಟ್ಟುಪಾಡುಗಳೆಂಬುದು ಇಲ್ಲದೆ ಇರುವಂತಹ ಮತ್ತು ಮಾನವನೇ ನಿರ್ಮಿಸಿದಂತಹ ಎಲ್ಲಾ ರೀತಿಯಾದ ಗಡಿಗಳನ್ನು ಬಹಳಷ್ಟು ಸೂಕ್ಷ್ಮವಾಗಿ ದಾಟುವ ಮುಖೇನ ಈ ಕಾದಂಬರಿಯಡಿಯಲ್ಲಿ, ಎಲ್ಲರ ಮನಸ್ಸನ್ನು ಸೂರೆಗೊಳ್ಳುವ, ಪಾತ್ರಗಳಾಗಿ ಕಾಣುವಂತೆ ಕುವೆಂಪುರವರು ಇವರನ್ನು ಚಿತ್ರಿಸಿರುತ್ತಾರೆ. ಮುಂದುವರಿದು ನೋಡಿದಾಗ ಚೀಂಕ್ರ-ದೇಯಿ ಇಡೀ ಕಾದಂಬರಿಯಲ್ಲಿ ಸಂಕೀರ್ಣವೇ ಇಲ್ಲದ ಪಾತ್ರಗಳಾಗಿ ಕಾಣಿಸಿಕೊಳ್ಳುತ್ತಾರೆ. ಚೀಂಕ್ರನು ಮಹಾಕುಡುಕನಾಗಿ ತನ್ನ ಹೆಂಡತಿಯ ಮೇಲೆ ಬಹಳಷ್ಟು ದಬ್ಬಾಳಿಕೆಯನ್ನು ಮಾಡುತ್ತಾನೆ. ದೇಯಿಯು ಗಂಡನ ಕ್ರೌರ್ಯಕ್ಕೆ ಬಹಳಷ್ಟು ತೊಂದರೆಗೀಡಾಗುತ್ತಾಳೆ. ಆರು ಮಕ್ಕಳಾಗಿ ಏಳನೆಯ ಮಗುವಿಗೆ ಬಸುರಿಯಾಗಿರಬೇಕಾದರೆ ಆಕೆಯನ್ನು ದುಡಿಸಿಕೊಳ್ಳುವ ಕ್ರೂರಿಯಾಗಿ ಕಾಣಿಸಿಕೊಳ್ಳುತ್ತಾನೆ. ಕೊನೆಗೆ ಚೀಂಕ್ರನ ಲೈಗಿಂಕ ಬಲಾತ್ಕಾರದಿಂದ ಗರ್ಭಸ್ರಾವವಾಗಿ ಸಾಯುತ್ತಾಳೆ. ಹೆಂಡತಿಯ ಮರಣದ ನಂತರ ಪಿಜಿಣನ ಹೆಂಡತಿಯಾದ ಅಕ್ಕಣಿಯ ಕಡೆ ಆಕರ್ಷಿತನಾಗುತ್ತಾನೆ. ಅಂತಕ್ಕನ ಮಗಳಾದ ಕಾವೇರಿಯ ಮೇಲೆ ನಡೆಯುವಂತಹ ಲೈಂಗಿಕ ಅತ್ಯಾಚಾರಕ್ಕೆ ಮುಖ್ಯ ಕಾರಣಕರ್ತನಾಗುತ್ತಾನೆ ಈ ರೀತಿಯಾದ ಜೀವನ ಕ್ರಮ ಇವರಿಬ್ಬರದಾಗಿರುತ್ತದೆ.

ಮಲೆಗಳಲ್ಲಿ ಕಂಡು ಬರುವಂತಹ ಪಿಜಣ-ಅಕ್ಕಣಿ ಇವರ ಜೀವನ ಕ್ರಮವೂ ಕೂಡ ಇದ್ದಂತಹ ಪರಿಸರಕ್ಕೆ ತಮ್ಮನ್ನು ಅನ್ವಯಿಸಿಕೊಂಡು ಬಾಳ್ವೆ ನಡೆಸುವಂಥದ್ದಕ್ಕೆ ಉದಾಹರಣೆ ಪಿಜಣ ಅನಾರೋಗ್ಯದಿಂದ ನರಳುವಂತಹವನು ತನ್ನ ದೈಹಿಕ ಅಸಹಾಯಕತೆಯನ್ನು ಬಲ್ಲಂತಹ ಅವನು ಆಕೆಯನ್ನು ಬೇರೆಯವರಿಂದ ಸುಖ ಪಡೆಯುವಂತಾಗಲಿ ಎಂಬುದಾಗಿ ಆಶಿಸುವವಂತವನಾಗಿ ಕಾಣಿಸಿಕೊಳ್ಳುತ್ತಾನೆ. ಆದರೂ ಎಲ್ಲೋ ಒಂದು ಕಡೆ ಅವನು ತನ್ನ ಮರ್ಯಾದೆಗೆ ಭಂಗ ಬರುವ ಬಗ್ಗೆ ಆತಂಕಗೊಳ್ಳುತ್ತಾನೆ. ತನ್ನ ಜೀವವನ್ನು ಬಿಟ್ಟರೆ ಖಂಡಿತವಾಗಿಯೂ ಆ ಸಂದರ್ಭದಲ್ಲಾದರೂ ಆಕೆಗೆ ಸುಖವೆಂಬುದು ಸಿಗುತ್ತದೆ ಎಂಬುವುದಾಗಿ ಭಾವಿಸಿ ಆತ್ಮಹತ್ಯೆಗೆ ಶರಣಾಗುತ್ತಾನೆ. ತದನಂತರದಲ್ಲಿ ಅಕ್ಕಣಿಯು ಚೀಂಕ್ರನಿಂದ ಲೈಂಗಿಕ ಆಕರ್ಷಣೆಗೆ ಒಳಗಾಗುತ್ತಾಳೆ. ನಿಧಾನವಾಗಿ ತನ್ನ ಅಪರಾಧಿ ಪ್ರಜ್ಞೆಯಿಂದ ಹೊರ ಬರುವ ಮುಖೇನ ಆತನನ್ನು

ವಿರೋಧಿಸುವ ಮೂಲಕ ಆತನ ಮಕ್ಕಳನ್ನು ಸಾಕುವಂತಹ ಮಾತೃಹೃದಯದವಳಾಗಿ ಕಾಣಿಸಿಕೊಳ್ಳುತ್ತಾಳೆ. ಪಿಜಣ-ಅಕ್ಕಣಿಯವರದು ಸಾಮರಸ್ಯವಿಲ್ಲದ ದಾಂಪತ್ಯಕ್ಕೆ ಉದಾಹರಣೆಯಾಗಿ, ಕಾಣಿಸಿಕೊಳ್ಳುತ್ತಾರೆ. ಇಲ್ಲಿ ನಾವು ದಾಂಪತ್ಯದ ಅನನ್ಯವಾದ ಅನುರಾಗಕ್ಕಾಗಿ ತನ್ನ ಬದುಕಿನ ಕ್ರಮವನ್ನು ಸಾಗಿಸಿದ್ದುದನ್ನು ಕಾಣಬಹುದಾಗಿದೆ. ಈ ಸಂದರ್ಭದಲ್ಲಿ ಕೌಟುಂಬಿಕ ದುರಂತಗಳು ವ್ಯಕ್ತಿ ಮತ್ತು ಸಮಾಜಕ್ಕೆ ಸಮಸ್ಯೆಗಳಾಗಿ ಪರಿಣಮಿಸುವುದರಿಂದ ಆಗುವಂತಹ ಅನಾಹುತಗಳನ್ನು ಕುವೆಂಪು ಸಂವೇದನೆ ಅತ್ಯಂತ ಪ್ರಜ್ಞಾಪೂರ್ವಕವಾಗಿಯೇ ಚಿಂತಿಸಿರುವುದನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ. ಒಮ್ಮೆ ತಿಮ್ಮಪ್ಪ ಹೆಗ್ಗಡೆಗೆ ಭರಮೈ ಹೆಗ್ಗಡೆ ತನ್ನ ತಂಗಿಯಾದ ಲಕ್ಕಮ್ಮಳನ್ನು ಮದುವೆ ಮಾಡಿಕೊಡಲು ನಿರಾಕರಿಸಿದಂತಹ ಸಂದರ್ಭದಲ್ಲಿ ಭರಮೈಹೆಗ್ಗಡೆ ಮತ್ತು ಚಿನ್ನಮ್ಮನ ಮದುವೆಯ ಸಂಬಂಧಗಳನ್ನು ಮುರಿಯುವಂತಹ ಇತರೆ ಸಂಬಂಧಗಳನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ. ಗುತ್ತಿ-ತಿಮ್ಮಿ ಮತ್ತು ಬಚ್ಚನ ನಡುವೆ ಏರ್ಪಡುವಂತಹ ವಿವಾಹ ಸಂಬಂಧಿ ಜಗಳಗಳು, ಬೆಟ್ಟಳ್ಳಿ ದೇವಯ್ಯಗೌಡ ಕಾವೇರಿ ಮತ್ತು ಜೀವರತ್ನಯ್ಯನ ಮಗಳ ನಡುವಿನ ಅನೈತಿಕವಾದಂತಹ ಪ್ರಣಯದ ಕಾಮ ಸಂಬಂಧಗಳು ಮುಕುಂದಯ್ಯ-ಚಿನ್ನಮ್ಮನ ನಡುವಿನ ಪ್ರೇಮ ಸಂಬಂಧಗಳು, ಐತ-ಪೀಂಚಲಳ ಸಹಜವಾದಂತೆ ಅನುರಾಗದ ವೈವಾಹಿಕ ಸಂಬಂಧಗಳು, ಚೀಂತ್ರ-ದೇಯಿ, ಪಿಜಿಣ-ಅಕ್ಕಣಿ ಕುಟುಂಬಗಳ ದುರಂತ ಮತ್ತು ಅನೈತಿಕ ಸಂಬಂಧಗಳು, ಹೂವಳ್ಳಿ ವೆಂಕಣ್ಣನಾಯಕ ಮತ್ತು ನಾಗತ್ತೆ ನಾಗಕ್ಕರ ನಡುವಿನ ದೈಹಿಕ ಸಂಬಂಧಗಳು ಈ ರೀತಿಯಾಗಿ ಎಲ್ಲಾ ರೀತಿಯಾದಂತಹ ಅಸಂಖ್ಯವಾದಂತಹ ಗಂಡು ಮತ್ತು ಹೆಣ್ಣಿನ ಸಂಬಂಧಗಳನ್ನು, 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕುವೆಂಪುರವರು ಒಂದು ಪ್ರಾದೇಶಿಕ ಬದುಕಿನ ಅಸಂಖ್ಯ ಕೌಟುಂಬಿಕವಾದಂತಹ ದುರಂತಗಳನ್ನು ಮತ್ತು ಸಾಮರಸ್ಯದ ಸಾಧ್ಯತೆಗಳ ಹಿನ್ನಲೆಯಲ್ಲಿ ಚಿತ್ರಿಸಿರುತ್ತಾರೆ.

ಕುವೆಂಪು ಅವರ ಈ ಎಲ್ಲ ಬಗೆಯ ಸಂಪೂರ್ಣವಾದ ಸಾಹಿತ್ಯದ ಸೃಷ್ಟಿಯ ಪ್ರಮುಖ ವಿಚಾರವೆಂದರೆ ಅದು ವಸಾಹತುಶಾಹಿ ಸಂಸ್ಕೃತಿಗೆ ತೋರಿದ ಪ್ರತಿಕ್ರಿಯೆಯೇ ಆಗಿರುತ್ತದೆ. ಇಲ್ಲಿ ಬಹಳ ಪ್ರಮುಖವಾಗಿ ನಾವು ಗಮನಿಸಬೇಕಾದಂತಹ ಅಂಶವೆಂದರೆ ಕುವೆಂಪುರವರ ಸೃಷ್ಟಿಶೀಲತೆಯನ್ನು ಮತ್ತು ಕನ್ನಡ ಸಂಸ್ಕೃತಿಯಲ್ಲಿ ಉಂಟಾದ ಎಲ್ಲಾ ಸಂಘರ್ಷಗಳನ್ನು ಅಭಿವ್ಯಕ್ತಿ ಸುತ್ತಾ, ಸಮಗ್ರವಾಗಿ ಭಾರತೀಯರ ಸಂವೇದನೆಯ ನೆಲೆಗಳಿಗೆ ತಮ್ಮ- ತಮ್ಮ ಚಿಂತನೆಗಳನ್ನು ಸೇರಿಸಿರುವುದೇ ಆಗಿರುತ್ತದೆ. ಸಂಸ್ಕೃತಿಯೂ ಚರಿತ್ರೆಯ ಶುಷ್ಕ ಚಲನೆಗಳೆಲ್ಲವನ್ನು ಮೀರುವ

ಮೂಲಕವಾಗಿ ಮಾನವೀಯವಾದಂತಹ ಕ್ರಿಯಾಚರಣೆಗಳಲ್ಲಿನ ಕ್ರಿಯಾ ಸಂಬಂಧಗಳು ಎಂಥ ವಲಯಗಳನ್ನು ಒಳಗೊಂಡಿರುತ್ತವೆ ಎಂಬುದನ್ನು ಹುಡುಕುವ ಕಾರ್ಯವನ್ನು ಕೈಗೊಳ್ಳುತ್ತದೆ.

ಕುವೆಂಪುರವರು ವಸಾಹತುಶಾಹಿಯ ಕಾರಣದಿಂದಾಗಿ ಉಂಟಾದಂತಹ ಭೌತಿಕ ಬದಲಾವಣೆಗಳಿಗೆ ಸಂಬಂಧಿಸಿದಂತೆ ನಮ್ಮ ಒಂದು ಒಟ್ಟಾರೆ ಕುಟುಂಬದ ವ್ಯವಸ್ಥೆಯಲ್ಲಿ ಉದ್ಭವಿಸಿದಂತಹ ಅನೇಕ ರೀತಿಯಲ್ಲಿ ಅವಸ್ಥಾಂತರಗಳಿಗೂ ಎಂಥ ಸಂಬಂಧಗಳು ಇರಬಹುದೆಂಬುದನ್ನು ಚಿತ್ರಿಸುತ್ತಾರೆ.

ವಸಾಹತುಶಾಹಿಯು ಹೇಗೆ ಸ್ಥಳೀಯ ಧಾರ್ಮಿಕ ನಂಬಿಕೆಗಳಿಂದ ಜನರು ಹೊರ ಬರುವಂತೆ ಮಾಡುವ ಸಲುವಾಗಿ ಕ್ರೈಸ್ತ ಮತಾಂತರ ಪ್ರಕ್ರಿಯೆಯನ್ನುಂಟು ಮಾಡಿತು ಎಂಬುದನ್ನು ನಾವಿಲ್ಲಿ ಗ್ರಹಿಸಬಹುದಗಿದೆ. ಅಂದರೆ ವಸಾಹತು ಸಂಸ್ಕೃತಿ ಹೊತ್ತು ತಂದ ಕ್ರೈಸ್ತ ಪುರೋಹಿತಶಾಹಿ ವ್ಯವಸ್ಥೆಯು ತನ್ನ ಧರ್ಮ ವಿಸ್ತರಣೆಗಾಗಿ ಅಪಮೌಲ್ಯಗೊಳಿಸುತ್ತಿರುವುದನ್ನು ಪ್ರಶ್ನಿಸಲಾರದೆ ಸ್ಥಳೀಯ ಮತಗಳ ಧೋರಣೆಗಳನ್ನು ಕಾದಂಬರಿಯು ಹೇಗೆ ಪ್ರಶ್ನಿಸುತ್ತದೆ ಎಂಬುದನ್ನು ಹಾಗೆಯೇ ಸ್ಥಳೀಯರನ್ನು ತನ್ನಕಡೆಗೆ ಸೆಳೆದುಕೊಳ್ಳುವ, ಸಲುವಾಗಿ ಅವರಿಗೆ ವಸ್ತುಗಳನ್ನು ಪರಿಚಯಿಸುವ ಮೂಲಕ ಅಂದರೆ ಉದಾಹರಣೆಗೆ ಬೈಸಿಕಲ್ಲಾಗಿರಬಹುದು, ಅದರ ಸವಾರಿಯ ಅಭ್ಯಾಸವಾಗಿರಬಹುದು, ಅಲ್ಲಿನ ಜನರಿಗೆ ಗಡಿಯಾರವನ್ನು ಕೊಡುವುದಿರಬಹುದು. ಕಾಫಿಯ ಪರಿಚಯವನ್ನು ಆತಂಕ್ಕದ ಮುಖಾಂತರ ಮಾಡುವುದು ಆಗಿರಬಹುದು ಇವೆಲ್ಲವೂ ಸಹ ಮಲೆನಾಡಿನಲ್ಲಿ ಇರುವಂತಹ ಸ್ಥಳೀಯರನ್ನು ಮತಾಂತರಗೊಳಿಸುವ ಸದುದ್ದೇಶದಿಂದಲೇ ಪಾದ್ರಿ ಜೀವರತ್ನಯ್ಯನ ಮೂಲಕ ಎಲ್ಲಾ ನೂತನವಾಗಿ ಆಧುನಿಕತೆಗೆ ತೆರವು ಮಾಡಿಕೊಡುವಂತಹ ಸಂಪೂರ್ಣವಾದ ಅಂಶಗಳನ್ನು ಕುವೆಂಪುರವರು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಡಿಯಲ್ಲಿ ಗ್ರಹಿಸುವ ಮುಖೇನ ವಸಾಹತುಶಾಹಿಯ ಪ್ರಜ್ಞೆಯೂ ನಿಧಾನವಾಗಿ ಹೇಗೆ ಅಲ್ಲಿನ ಸ್ಥಳೀಯರ ಮನಸ್ಸನ್ನು ಸೂರೆಗೊಂಡಿತು ಎಂಬುದನ್ನು ಗ್ರಹಿಸಬಹುದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ವಸಾಹತುಶಾಹಿಯ, ಆಗಮನದಿಂದಾಗಿ ಮತ್ತು ಆ ಸಂಸ್ಕೃತಿಯಿಂದಾಗಿ ಪರಿಚಯವಾದಂತಹ ಆಧುನಿಕ ಶಿಕ್ಷಣದ ಫಲವಾಗಿಯೂ, ಭಾರತೀಯ ಸಂವೇದನೆಯಲ್ಲಿ ಉದ್ಭವಿಸಿದಂತಹ ಸ್ಥಿತ್ಯಂತರಗಳಿಂದ ನಮ್ಮ ಸಾಂಸ್ಕೃತಿಕ ಬದುಕು ವಿಭಿನ್ನ ನೆಲೆಗಳಲ್ಲಿ ಬದಲಾವಣೆಗಳಿಗೆ ಗುರಿಯಾಯಿತು ಎಂಬುದು ನಾವಿಲ್ಲಿ ಮನಗಾಣುತ್ತೇವೆ. ಇಂತಹ

ನೂತನವಾದಂತಹ ಬದಲಾವಣೆಗಳಿಂದಾಗಿ ಎಚ್ಚರಗೊಂಡಂತಹ ರಾಷ್ಟ್ರೀಯ ಪ್ರಜ್ಞೆಯು ಫಲವಾಗಿ ಪ್ರಾದೇಶಿಕ ಮಟ್ಟದಲ್ಲಿ ನವಜೀವನವೆಂಬುದು ಆರಂಭವಾಯಿತು ಎಂಬುದನ್ನು ನಾವು ತಿಳಿಯಬಹುದಾಗಿದೆ.

ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಒಟ್ಟು ಅನುಭವಗಳನ್ನು ಗಮನಿಸಿದಂತಹ ಸಂದರ್ಭದಲ್ಲಿ ಹೊಸ ವೈಚಾರಿಕತೆ ಮತ್ತು ಬೌದ್ಧಿಕತೆಯ ಚಿಂತನೆಯ ನೆಲೆಗಳನ್ನು ನಾವು ತಿಳಿಯುತ್ತೇವೆ ಹಾಗೆಯೇ ಕಾದಂಬರಿಯ ಹಿನ್ನಲೆಯಲ್ಲಿ ಸ್ಥಳೀಯತೆಯಲ್ಲಿ ಕಂಡು ಬರುವಂತಹ ಜನರ ಬದುಕಿನ ಕ್ರಮವನ್ನು ಹಾಗೂ ಅಲ್ಲಿನ ಪರಿಸರದ ವರ್ಣನೆಯನ್ನೂ ಗಮನಿಸಬಹುದಾಗಿರುತ್ತದೆ. ಅದರ ಜೊತೆಗೆ ವಸಾಹತುವಿನಪ್ರಜ್ಞೆಯಿಂದಾಗಿ ಮೊದ-ಮೊದಲು ಅಲ್ಲಿನ ವಿಚಾರಗಳನ್ನು ಸ್ವೀಕರಿಸಲು ನಿರಾಕರಿಸಿದಂತಹ ಜನರು ನಿಧಾನವಾಗಿ ಅದನ್ನು ತಮ್ಮದನ್ನಾಗಿಸಿಕೊಳ್ಳಲು ಮುಂದಾಗುತ್ತಾರೆ ಅಂದರೆ ಅನಾಗರೀಕತೆಯಿಂದ ಹೊರ ಬರುವ ಮುಖಾಂತರ ನಾಗರೀಕತೆಯ ಕಡೆ ಮುನ್ನಡೆಯನ್ನು ಸಾಗಿಸುವಂತಹುದನ್ನು ಮತ್ತು ಆಧುನಿಕತೆಯನ್ನು ಸ್ವಾಗತಿಸುವುದನ್ನು ನಾವಿಲ್ಲಿ ನೋಡಬಹುದಾಗಿದೆ. ಇಲ್ಲಿ ನಾಗರೀಕತೆ ಎನ್ನುವ ಕಲ್ಪನೆಯು ಪಾಶ್ಚಾತ್ಯ ಪ್ರೇರೇಪಣೆ ಆಗಿದೆ ಎಂಬುದನ್ನು ಮರೆಯುವಂತಿಲ್ಲ. ಅಂತೆಯೆ ಅನಾಗರೀಕ ವೆಂಬುದು ಪೂರ್ತಿ ಸ್ಥಳೀಯ (ಗ್ರಾಮ್ಯ) ಎಂದು ಅರ್ಥ.

ಕುವೆಂಪುರವರ 'ಕಾನೂರು ಹೆಗ್ಗಡಿತಿ' ಕಾದಂಬರಿಯು ರಚನೆಗೊಳ್ಳುವ ಕಾಲಕ್ಕಾಗಲೇ ಮಲೆನಾಡಿನ ಬದುಕಿನಲ್ಲಿ ನವನಾಗರೀಕತೆ ಎನ್ನುವುದು ಅನೇಕ ರೀತಿಯಲ್ಲಿ ಪ್ರವೇಶಿಸಿದ್ದು ಅದು ಆಧುನಿಕತೆಗೆ ಬಾಗಿಲನ್ನು ತೆರೆದಿತ್ತು. ಮೈಸೂರಿನಲ್ಲಿ ವಿಧ್ಯಾಭ್ಯಾಸಕ್ಕೆ ತೊಡಗಿದ್ದ ಕಾನೂರು ಚಂದ್ರಯ್ಯಗೌಡರ ಅಣ್ಣ ದಿವಂಗತ ಸುಬ್ಬಯ್ಯಗೌಡರು ಮತ್ತು ನಾಗಮ್ಮನವರ ಏಕೈಕ ಪುತ್ರ ಹೂವಯ್ಯ ಹಾಗೂ ರಾಮಯ್ಯ ರಜೆಗೆ ಕಾನೂರಿಗೆ ಬರುತ್ತಾರೆ ತದನಂತರ ಅಲ್ಲಿನ ಬದಲಾದ ಪರಿಸ್ಥಿತಿಯಿಂದಾಗಿ ತಮ್ಮ ಓದನ್ನು ಅರ್ಧಕ್ಕೆ ನಿಲ್ಲಿಸಿ ಕಾನೂರಿನಲ್ಲಿಯೇ ಉಳಿದುಕೊಳ್ಳಬೇಕಾಗುತ್ತದೆ. ಇದಕ್ಕೆ ಮುಖ್ಯಕಾರಣ ಸ್ಥಳೀಯತೆಯೇ ಆಗಿದೆ ಹೂವಯ್ಯನು ವಿದ್ಯಾವಂತ ಆದರ್ಶವಾದಿಯಾದ ಕಾರಣದಿಂದಾಗಿ ಸ್ಥಳೀಯತೆಗೆ ತನ್ನನ್ನು ತಾನು ಒಗ್ಗಿಸಿಕೊಳ್ಳದೇ ಒಂದು ರೀತಿ ಹೊರಗಿನವನಾಗಿ ನಿಂತು ಅಲ್ಲಿನ ಪ್ರತಿಯೊಂದು ಅಚಾರ-ವಿಚಾರಗಳನ್ನು, ನಂಬಿಕೆ-ನೆಲೆಗಳನ್ನು ಪ್ರಶ್ನಿಸುತ್ತಾನೆ. ಇದರಿಂದಾಗಿ ಸ್ವಲ್ಪ ಬೇಸತ್ತ ಜನರು ಅವರ ವಿಚಾರಗಳಿಗೆ ಮತ್ತು ಅವನು ಹೇಳುವ ಅನೇಕ ಅಂಶಗಳಿಗೆ ಒಂದು ರೀತಿಯ ಅಸಮ್ಮತಿ

ಸೂಚಿಸುತ್ತಾರೆ. ಕಾದಂಬರಿಯಲ್ಲಿ ಚಿತ್ರಿತವಾದ ಹೂವಯ್ಯನು ತನ್ನ ವಿಶಿಷ್ಟವಾದ ಮನೋಧರ್ಮದಿಂದಾಗಿ ಉಳಿದೆಲ್ಲಾ ಪಾತ್ರಗಳಿಗಿಂತ ಭಿನ್ನವಾಗಿ ಕಂಡುಬರುತ್ತಾನೆ. ತನ್ನ ಓದು, ವಿದ್ಯೆಗಳಿಂದಾಗಿ, ಆದರ್ಶದಿಂದಾಗಿ, ಕ್ರಿಯಾಶೀಲತೆಯಿಂದಾಗಿ ಮತ್ತು ಆಧ್ಯಾತ್ಮಿಕತೆಯಿಂದಾಗಿ ತನ್ನವರೇ ಆದ ಸ್ಥಳೀಯರ ಬದುಕನ್ನು ಒಂದು ಉನ್ನತವಾದ ನೆಲೆಗೆ ಕೊಂಡೊಯ್ಯಲು ಹವಣಿಸುತ್ತಾನೆ. ಆದರೆ ಅದೂ ಸಂಪೂರ್ಣವಾಗಿ ಯಶಸ್ವಿಯನ್ನು ಪಡೆದುಕೊಳ್ಳಲು ಸಾಧ್ಯವಾಗಲಿಲ್ಲವಾದರೂ ಕೂಡ ಸ್ವಲ್ಪ ಮಟ್ಟಿಗಾದರೂ ಅಲ್ಲಿನ ಜನರು ತಮ್ಮ ಬದುಕನ್ನು ನಾಗರೀಕತೆಯ ಕಡೆಗೆ ಹೆಜ್ಜೆ ಇಡಲು ಪ್ರಯತ್ನಿಸುತ್ತಾರೆ ಎಂಬುದು ಆಶಾದಾಯಕವಾದ ಅಂಶವಾಗಿ ಕಂಡುಬರುತ್ತದೆ. ಸ್ಪಷ್ಟವಾಗಿ ಹೇಳುವುದಾದರೆ ಅನಾಗರೀಕತೆಯ ಬದುಕಿನಿಂದಾಗಿ ನಾಗರೀಕತೆಯ ಕಡೆಗೆ ಅವರು ಮುನ್ನಡೆಯುತ್ತಾರೆ ಎಂಬುದು ಗಮನಿಸಬೇಕಾದ ಅಂಶವಾಗಿದೆ.

ಪುನಃ ಹೂವಯ್ಯನ ಬದುಕಿನತ್ತ ಬರುವುದಾದರೆ ಮುತ್ತಳ್ಳಿ ಶ್ಯಾಮೇಗೌಡರ ಮಗಳಾದ ಸೀತೆಯನ್ನು ಆತ ತನ್ನ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸಿರುತ್ತಾನೆ. ಆದರೆ ತುಂಗಾ ತೀರದ ವೆಂಕಪ್ಪ ಜೋಯಿಸರ ಕುತಂತ್ರದಿಂದಾಗಿ ಹೂವಯ್ಯನಿಗೆ ಮತ್ತು ಸೀತೆಗೆ ಮದುವೆ ಆಗುವುದಿಲ್ಲ. ವೆಂಕಪ್ಪ ಜೋಯಿಸರ ಕುತಂತ್ರಕ್ಕೆ ಮುಖ್ಯ ಕಾರಣವೆಂದರೆ ಓದಿ ಬಂದ ಹೂವಯ್ಯನು ಮಲೆನಾಡಿನ ಜನರ ಮೌಢ್ಯತೆಯನ್ನು ಹೋಗಲಾಡಿಸಲು ಪ್ರಯತ್ನಿಸುತ್ತಾನೆ ಅಂದರೆ ವೆಂಕಪ್ಪ ಜೋಯಿಸರು ಹೇಳುವಂತಹ ವಿಚಾರಗಳನ್ನು ಉದಾಹರಣೆಗೆ ಜ್ಯೋತಿಷ್ಯ ಹೇಳುವುದು ಆಗಿರಬಹುದು, ಭೂತಗಳಿಗೆ ಹಣ್ಣು ಕಾಯಿ ಕೊಡುವುದು ಆಗಿರಬಹುದು ಇವೆಲ್ಲವನ್ನು ಸಂಪೂರ್ಣವಾಗಿ ವಿರೋಧಿಸುತ್ತಾನೆ. ಇದಕ್ಕೆ ಪೂರಕವಾಗಿ ಇನ್ನೊಂದೆಡೆಗೆ ಚಂದ್ರಯ್ಯಗೌಡರಿಗೆ ತಮ್ಮ ಮಗನಾದ ರಾಮಯ್ಯನಿಗೆ ಹೇಗಾದರೂ ಸೀತೆಯನ್ನು ಮದುವೆ ಮಾಡಬೇಕೆಂಬ ಹಿರಿದಾಸೆ ಇತ್ತು. ರಾಮಯ್ಯನೂ ಸಹ ತನ್ನ ತಂದೆಯ ತಂತ್ರದಿಂದ ಹೂವಯ್ಯನನ್ನು ದ್ವೇಷಿಸುವ ಮುಖೇನ ಸೀತೆಯನ್ನು ಮದುವೆಯಾಗುತ್ತಾನೆ ಮತ್ತು ಅದೇ ಕಾರಣದಿಂದಾಗಿ ಮುಂದೆ ಉಂಟಾದ ಅನೇಕ ಕಷ್ಟಗಳಿಂದ ಜರ್ಜರಿತನಾಗುತ್ತಾನೆ. ತನ್ನ ಕಣ್ಣು ಮುಂದೆಯೇ ಕಾನೂರು ಪತನವಾಗುತ್ತಿರುವುದನ್ನು ಗಮನಿಸಿ ತಡೆದುಕೊಳ್ಳಲಾಗದೆ ಆತ ಕೊನೆಗೆ ಆತ್ಮಹತ್ಯೆಗೆ ಶರಣಾಗುವುದು ವಿಷಾದಕರ ಸಂಗತಿಯೇ ಸರಿ. ಮತ್ತೊಂದು ಕಡೆ ಹೂವಯ್ಯನನ್ನು ಮರೆಯಲಾರದ ಸೀತೆಯೂ ಮಾನಸಿಕ ವೇದನೆಗಳಿಂದಾಗಿ ಬಹಳಷ್ಟು ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಪತಿಯಾದ ರಾಮಯ್ಯನ ಸಾವಿನ ನಂತರ ತನ್ನ ತಂಗಿಯಾದಂತಹ ಲಕ್ಷ್ಮಿ ಜೊತೆಯಲ್ಲಿಯೇ ಆಕೆ ಉಳಿದುಕೊಂಡು ಕೊನೆಗೆ ಹೂವಯ್ಯನ ಆಧ್ಯಾತ್ಮಿಕ

ಸಂಗಾತಿಯಾಗುತ್ತಾಳೆ. ಇದು ಕಾದಂಬರಿಯಲ್ಲಿ ಹೀಗೆ ಸ್ಥಳೀಯತೆ-ಆಧುನಿಕತೆಗಳ, ಸಂಘರ್ಷ-ಸಂಕ್ರಮಣ ಇಂತಹ ಪಾತ್ರಗಳ ವರ್ಣನೆ-ಸ್ವಭಾವ ಮತ್ತು ಅಸ್ತಿತ್ವಗಳ ಮೂಲಕ ಪ್ರಕಟಗೊಳ್ಳುತ್ತದೆ. ಇದೆಲ್ಲದರ ಮೇಲೆ ವಸಾಹತುಶಾಹಿ ನೆರಳು ಇದೆ!

ಶಿವರಾಮಕಾರಂತರಲ್ಲಿ ವಸಾಹತುಶಾಹಿ ಮತ್ತು ಸ್ಥಳೀಯ ಸಂಘರ್ಷದ ಇನ್ನೊಂದು ಆಯಾಮ ಕಂಡುಬರುತ್ತದೆ. ಕಾರಂತರ ಮರಳಿಮಣ್ಣಿಗೆ ಕಾದಂಬರಿಯಲ್ಲಿ ಈ ದೃಷ್ಟಿಯಿಂದ ಬಹಳ ಮುಖ್ಯವಾಗಿ ನಾವು ಗ್ರಹಿಸಬಹುದಾದ ಅಂಶವೆಂದರೆ

"ವಸಾಹತುಶಾಹಿಯ ಪ್ರಭಾವದಲ್ಲಿ ಹುಟ್ಟಿಕೊಂಡ ಸಾಹಿತ್ಯವನ್ನು ಮತ್ತು ಸಂಸ್ಕೃತಿಯ ಕೆಲವು ಅಂಶಗಳನ್ನು ಗುಮಾನಿಯಿಂದ ನೋಡುವುದು ಮತ್ತು ಪೂರ್ವದ ಸಾಹಿತ್ಯದಲ್ಲಿ ನಿಜವಾದ ದೇಶಿಯ ಅಂಶಗಳನ್ನು ಗುರ್ತಿಸಲು ಪ್ರಯತ್ನಿಸುವುದು ಬಹುಪಾಲು ದೇಶೀಯ ಸಂಸ್ಕೃತಿಗಳಲ್ಲಿ ಕಂಡು ಬರುವ ಧೋರಣೆಯಾಗಿದೆ. ಈ ಧೋರಣೆಯ ಪ್ರಬಲವಾದ ವಿರೋಧವಿರುವುದು ಸ್ವಾತಂತ್ರ್ಯದ ನಂತರ ಹೆಚ್ಚು ಸ್ಫುಟವಾಗಿ ತೋರಿಬಂದ ಆಧುನೀಕರಣ ಮತ್ತು ನವ್ಯತೆಯ ಬಗ್ಗೆ ಎನ್ನುವುದು ಕುತೂಹಲಕಾರಿಯಾದ ಅಂಶವಾಗಿದೆ. ಒಂದು ಸಿದ್ಧಾಂತವಾಗಿ ದೇಶೀವಾದ ಬೆಳೆದು ಬಂದದ್ದು ಸ್ವಾತಂತ್ರ್ಯದ ನಂತರದ ಆಧುನೀಕತೆಯ ವಿರುದ್ಧ, ಈ ಪ್ರಕ್ರಿಯೆಯನ್ನು ಹೀಗೆ ವಿವರಿಸಬಹುದು. ವಸಾಹತುಶಾಹಿಯ ವಿರುದ್ಧ ನಡೆಯುವ ರಾಷ್ಟ್ರೀಯತೆಯ ಆಂದೋಲನದ ಸಮಯದಲ್ಲಿ ದೇಶೀಯ ಸಂಸ್ಕೃತಿ ನಿಜವಾಗಿಯೂ ತನ್ನ ಸ್ವಂತಿಕೆಯನ್ನು ಕಾಪಾಡಿಕೊಳ್ಳುವ ಸಾಮರ್ಥ್ಯ ಪಡೆದಿರುತ್ತದೆ; ಇಲ್ಲವೆ ಆ ಸಂದರ್ಭದ ಭಾವುಕತೆಯಿಂದಾಗಿ ತನ್ನ ಆಂತರ್ಯದಲ್ಲಾದ ಪಲ್ಲಟಗಳನ್ನು ಅಷ್ಟಾಗಿ ಗಮನಿಸಿರುವುದಿಲ್ಲ; ಸ್ವಾತಂತ್ರ್ಯದ ನಂತರ ಶುರುವಾದ ಸ್ವವಿಮರ್ಶೆಯಿಂದಾಗಿ ವಸಾಹತುಶಾಹಿಯ ಪ್ರಭಾವದಿಂದ ಹುಟ್ಟಿಕೊಂಡ ಸಾಂಸ್ಕೃತಿಕ ಏರುಪೇರುಗಳ ಬಗ್ಗೆ ಹೆಚ್ಚಿನ ಎಚ್ಚರ ಹುಟ್ಟಿಕೊಳ್ಳುತ್ತದೆ; ಈ ಪ್ರಕ್ರಿಯೆಯ ಫಲವೇ ದೇಶೀವಾದ.

ವಸಾಹತುಶಾಹಿಯ ಪ್ರಚ್ಛನ್ನವಾದ ಉದ್ದೇಶವೆಂದರೆ ದೇಶೀಯ ಸಂಸ್ಕೃತಿಯ ಸ್ವಂತಿಕೆಯನ್ನು ನಾಶಮಾಡುವುದು, ತಾನು ದೇಶೀಯ ಸಂಸ್ಕೃತಿಯನ್ನು ಯಾವ ದೃಷ್ಟಿಯಿಂದ ನೋಡುತ್ತದೆಯೋ ಅದೇ ನೋಟ ಕ್ರಮವನ್ನು ದೇಶೀಯ ಸಂಸ್ಕೃತಿಯ ಮೇಲೂ ಹೇರುವುದು. ಅಂದರೆ ದೇಶೀಯ ಸಂಸ್ಕೃತಿ ತನ್ನನ್ನು ವಸಾಹತುಶಾಹಿ ಸಂಸ್ಕೃತಿಯ ಪರಿಕಲ್ಪನೆಗಳ ಮೂಲಕ

ನೋಡಿಕೊಳ್ಳುವಂತೆ ಮಾಡುವುದು. ಇದಕ್ಕೆ ಪೂರಕವಾದ ಪ್ರಕ್ರಿಯೆಯೆಂದರೆ ಆಧುನೀಕರಣದ ಹೆಸರಿನಲ್ಲಿ ಪರಕೀಯ ಸಂಸ್ಕೃತಿಯ ಅನುಕರಣೆ ನಡೆಯುವ ಪ್ರಕ್ರಿಯೆ."[2]

ಇಲ್ಲಿ ಚಿತ್ರಿತವಾದ ಮೂರು ತಲೆಮಾರಿನ ಜೀವನ ಕ್ರಮಗಳನ್ನು ಕೂಲಂಕುಷವಾಗಿ ವೀಕ್ಷಿಸಿದಾಗ; ಇಲ್ಲಿ ಬರುವ ಒಂದೊಂದು ಹೆಣ್ಣಿನ ಜೀವನವಾಗಿರಬಹುದು ಅಥವಾ ರಾಮ ಐತಾಳ, ಲಚ್ಚ ಮತ್ತು ರಾಮುವಿನ ಜೀವನ ಕ್ರಮವಾಗಿರಬಹುದು ಒಬ್ಬರಿಗಿಂತ ಇನ್ನೊಬ್ಬರು ಹೇಗೆ ಭಿನ್ನವಾಗಿದ್ದರು ಎಂಬುದು ಮುಖ್ಯವಾಗುತ್ತದೆ. ಮತ್ತು ಅದಕ್ಕೆ ಕಾರಣಗಳು ಅಷ್ಟೇ ನಿಶ್ಚಲವಾಗಿರುತ್ತದೆ. ಪಾರೋತಿ ಮತ್ತು ಸರಸೋತಿಯರು ಹೇಗೆ ತಮ್ಮ ಬದುಕನ್ನು ಅಲ್ಲಿನ ಸ್ಥಳೀಯತೆಗೆ ಒಂದಿಸಿಕೊಂಡಿದ್ದರು. ಎಂಬುದಾಗಲೀ ಹಾಗೂ ರಾಮ ಐತಾಳನು ಪಾರೋತಿಗೆ ಮಕ್ಕಳು ಆಗದೇ ಹೋದ ಕಾರಣದಿಂದಾಗಿ ತಾನು ಮರು ಮದುವೆಯಾಗುವಂತಹ ವಿಷಯವನ್ನೇ ಆಕೆಗೆ ತಿಳಿಯ ಹೇಳದೆಯೇ ಸತ್ಯಭಾಮೆಯನ್ನು ಮದುವೆಯಾದಂತಹುದು ಈ ಎಲ್ಲವೂ ಸ್ಥಳೀಯತೆಯ ಫಲವೆ ಆಗಿರುತ್ತದೆ. ಪಾರೋತಿಯೂ ತನ್ನನ್ನು ತಾನು ಆ ಪುರುಷ ಪ್ರಧಾನ್ಯ ಸಮಾಜದಲ್ಲಿ ಆಕೆಯ ಬದುಕಿನ ಕ್ರಮಗಳನ್ನು ಶಿವರಾಮ ಕಾರಂತರು ಚಿತ್ರಿಸಿರುವುದು ಅತ್ಯಂತ ಮನೋಜ್ಞವಾಗಿದೆ. ಮುಂದುವರಿದು ನೋಡಿದಾಗ ಸತ್ಯಭಾಮೆಯ ಮಗನಾದ ಲಚ್ಚನನ್ನು ಪಾರೋತಿ ಪ್ರೀತಿಯಿಂದ ನೋಡುತ್ತಿದ್ದುದು ಒಮ್ಮೊಮ್ಮೆ ಸತ್ಯಭಾಮೆಯ ನಿಕೃಷ್ಟವಾದಂತಹ ಮಾತುಗಳಿಗೆ ಪಾರೋತಿ ನೋವನ್ನು ಅನುಭವಿಸುವುದು ಎಲ್ಲರ ಮನಸ್ಸನ್ನು ಕದಡುವಂತಹುದೇ ಆಗಿದೆ.

ಒಟ್ಟಾರೆ ಹೇಳುವುದಾದರೆ ಪಾರೋತಿಯೂ ತನ್ನ ಸಂಪೂರ್ಣವಾದ ಜೀವನದಲ್ಲಿ ಸಂಪ್ರದಾಯಿಕವಾಗಿ ಬಂದಂತಹ ಪದ್ಧತಿಗೆ ತನ್ನನ್ನು ತಾನು ಹೇಗೆ ಒಗ್ಗಿಸಿಕೊಂಡು ಅಲ್ಲಿನ ಸ್ಥಳೀಯತೆಗೆ ಹೊಂದಿಕೊಳ್ಳುವುದನ್ನು ನಾವು ನೋಡಬಹುದಾಗಿದೆ. ಯಾವುದೇ ಸಂದರ್ಭದಲ್ಲಿ ಆಗಲಿ ಆಕೆಯೂ ಮರು ಪ್ರಶ್ನೆಯನ್ನು ಕೇಳದೆ ತನ್ನ ಜೀವನವನ್ನು ಆ ಪರಿಸರಕ್ಕೆ ಹೊಂದಿಸಿಕೊಳ್ಳುವ ಮುಖೇನ ಬಾಳ್ವೆಯನ್ನು ನಡೆಸುತ್ತಿದುದ್ದು ಆ ಸಮಾಜದ ಯುಗಧರ್ಮವೇ ಆಗಿರಬೇಕು. ಮತ್ತೊಂದು ಕಡೆಯಲ್ಲಿ ಸರೋಸತಿಯ ಜೀವನ ಕ್ರಮವೂ ಪಾರೋತಿಯ ಜೀವನ ಕ್ರಮಕ್ಕಿಂತಲೂ. ಸ್ವಲ್ಪ ಭಿನ್ನವಾಗಿರುವುದನ್ನು ನಾವು ಗುರುತಿಸುತ್ತೇವೆ. ಆಕೆಯು ಸ್ಥಳೀಯತೆಗೆ ರೂಢಿ-ಆಚಾರ. ವಿಚಾರ ನಂಬಿಕೆಗಳಿಗೆ ತನ್ನನ್ನು ಒಗ್ಗಿಸಿಕೊಂಡಿದ್ದರೂ ಸಹ ಯಾವುದೇ ವಿಷಯವನ್ನೇ ಆಗಲಿ ಪಾರೋತಿಯ ರೀತಿಯಲ್ಲಿ ತಕ್ಷಣ ಸ್ವೀಕರಿಸುವಂತಹ ಗುಣ ಸರೋಸತಿಗೆ

ಇರಲಿಲ್ಲ. ರಾಮ ಐತಾಳನು ಯಾವುದೇ ವಿಚಾರವನ್ನು ಹೇಳಿದರೂ ಕೂಡ ಅದನ್ನು ಪ್ರಶ್ನಿಸುವ ಮುಖೇನ ತನಗೆ ಸರಿ ಎಂದೆನಿಸಿದಾಗ ಮಾತ್ರ ಅದನ್ನು ಸ್ವೀಕರಿಸುತ್ತಾಳೆಯೇ ವಿನಃ ತಕ್ಷಣ ಅದನ್ನು ಒಪ್ಪಿಕೊಳ್ಳುವಂತಹ ಅಥವಾ ಸ್ವೀಕರಿಸುವಂತಹ ಗುಣ ಸರೋಸತಿಯದು ಆಗಿರಲಿಲ್ಲ. ಆಕೆಯಲ್ಲಿದ್ದ ಧೈರ್ಯ ಸಾಮರ್ಥ್ಯ ಎಂತಹುದು ಎಂಬುದಕ್ಕೆ ಲೇಖಕರು ಒಂದು ರೂಪಕವನ್ನು ಕೊಡುತ್ತಾರೆ. ಪ್ರಮುಖವಾದ ಅಂಶವೆಂದರೇ ಸಮುದ್ರ ಅಲೆಗಳಿಗೆ ಅಭಿಮುಖವಾಗಿ ಈಜಿಕೊಂಡು ಹೋಗುವುದು, ಅದರ ಮೂಲಕ ಅಲ್ಲಿ ಬರುವ ದಿಮ್ಮಿಗಳನ್ನು ತರುವಂತಹ ಸಾಮರ್ಥ್ಯದ ಹೆಣ್ಣಾಗಿ ಈಕೆಯನ್ನು ಕಾರಂತರು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಹಾಗೂ ಪ್ರಾರಂಭದಲ್ಲಿಯೇ ಕಾರಂತರು ಈಕೆಯನ್ನು ಒಬ್ಬ ವಿಧವೆಯಾದ ಹೆಣ್ಣುಮಗಳಾಗಿಯೇ ಚಿತ್ರಿಸಿರುತ್ತಾರೆ. ಒಟ್ಟಾರೆಯಾಗಿ ಯಾವುದೇ ರೀತಿಯಾದ ವಿಚಾರಕ್ಕೂ ಕೂಡ ಸರಸೋತಿಯು ಧೃತಿಗೆಡದೆ ಆ ಸಮಸ್ಯೆಗಳನ್ನು ಹೇಗೆ ಎದುರಿಸುತ್ತಿದ್ದಳು ಎಂಬುದನ್ನು ನಾವು ನೋಡಬಹುದಾಗಿದೆ. ಇದು ಪಾರ್ವತಿಯ ನಂತರದ ತಲೆಮಾರಿನ ಕತೆ.

ಇದರ ಮುಂದುವರಿದ ರೂಪ ನಾಗವೇಣಿಯ ಬದುಕಿನ ಕ್ರಮ ಪಾರೋತಿ ಮತ್ತು ಸರಸೋತಿಯರ ಜೀವನಕ್ರಮಕ್ಕಿಂತಲೂ ವಿಭಿನ್ನವಾಗಿ, ಅಂದರೆ ಸಂಪೂರ್ಣವಾಗಿ ಬೇರೆ ರೀತಿಯಲ್ಲಿಯೇ ಬದುಕನ್ನು ಗ್ರಹಿಸಿರುವುದನ್ನು ಕಾರಂತರು ಚಿತ್ರಿಸಿರುತ್ತಾರೆ. ರಾಮ ಐತಾಳರ ಮಗನಾದ ಲಚ್ಚನ ಹೆಂಡತಿಯಾಗಿ ಬರುವ ನಾಗವೇಣಿಯೂ ಮೊದ ಮೊದಲು ಅಂದರೆ ಪ್ರಾರಂಭದ ಹಂತದಲ್ಲಿ ಹೊಸ ಬದುಕನ್ನು ಸ್ವೀಕರಿಸಿಕೊಳ್ಳುವಲ್ಲಿ ಸ್ವಲ್ಪ ಹಿಂಜರಿಕೆಯಿಂದ ಹತಾಶಳಾಗಿ ಕಾಣಿಸಿಕೊಂಡರೂ ಕೂಡ, ಸ್ಥಳೀಯತೆಗೆ ತನ್ನನ್ನು ತಾನು ಒಗ್ಗಿಸಿಕೊಂಡಿದ್ದರೂ ಸಹ ಈಕೆಯಲ್ಲಿ ವಸಾಹತುಶಾಹಿಯ ಪರಿಕಲ್ಪನೆ ಒಡಮೂಡಿ ಬಂದಿರುವುದನ್ನು ಕಾರಂತರು ಗುರ್ತಿಸುತ್ತಾರೆ ಮುಂದುವರಿದು ನೋಡಿದಾಗ ಆಕೆ ಯಾವುದೇ ಕಾರಣಕ್ಕೂ ತಾನು ಧೃತಿಕೆಡದೆ ನವನಾಗರೀಕತೆಯ ಪ್ರಜ್ಞೆಯನ್ನು ಮೂಡಿಸಿಕೊಳ್ಳುವ ಮೂಲಕವೇ ಬದುಕಿಗೆ ಅರ್ಥತಂದುಕೊಳ್ಳುತ್ತಾಳೆ. ಇದರಲ್ಲಿ ವಸಾಹತುಶಾಹಿಯ ಪಾಲೂ ಇದೆ.

ನಾಗವೇಣಿಯು ಬದುಕಿನುದ್ದಕ್ಕೂ ಕಷ್ಟ ಮತ್ತು ಸುಖಗಳನ್ನು ಹೇಗೆ ಸ್ವೀಕರಿಸುತ್ತಾಳೆ ಎಂಬುದನ್ನು ಶಿವರಾಮಕಾರಂತರು ಬಹಳ ಸ್ವಾರಸ್ಯಕರವಾಗಿ, ವಿವರವಾಗಿ ನಿರೂಪಿಸಿದ್ದಾರೆ. ಮೊದಲಿಗೆ ತನ್ನ ಪತಿಯಾದ ಲಚ್ಚನಿಂದಾಗಿ ಮೋಸಕ್ಕೆ ಒಳಗಾಗುವ ಮೂಲಕ ಯಾವುದೇ ರೀತಿಯಾದ ಸುಖ, ಸಂತೋಷಗಳನ್ನು ಆಕೆ ಅವನಿಂದ ಪಡೆಯಲಾಗಲಿಲ್ಲ. ತದನಂತರದಲ್ಲಿ

ತಾನು ಕಳೆದುಕೊಂಡಿದ್ದಂತಹ ಆಸೆ-ಆಕಾಂಕ್ಷೆಗಳನ್ನು ಪುನಃ ಪಡೆದುಕೊಳ್ಳುತ್ತಾಳೆ. ಅದನ್ನೇ ಶಿವರಾಮ ಕಾರಂತರು 'ಮರಳಿ ಮಣ್ಣಿಗೆ' ಎನ್ನುವ ಹೆಸರಿನಿಂದ ಗುರುತಿಸಿದ್ದಾರೆ ಎನ್ನಿಸುತ್ತದೆ. ಅಂದರೆ ಒಂದು ಕಾಲದಲ್ಲಿ ತಾನು ಏನನ್ನು ಕಳೆದುಕೊಂಡಿರುತ್ತಾಳೆಯೋ ಅದನ್ನು ಮತ್ತೆ ತನ್ನ ಮಗನಾದ ರಾಮುವಿನಿಂದ ನಾಗವೇಣಿಯು ಪಡೆಯುತ್ತಾಳೆ.

ಹೀಗೆ 'ಕಾನೂರು ಹೆಗ್ಗಡಿತಿ,' 'ಮಲೆಗಳಲ್ಲಿ ಮದುಮಗಳು', 'ಮರಳಿಮಣ್ಣಿಗೆ' ಈ ಮೂರು ಕಾದಂಬರಿಗಳಲ್ಲಿ ನಾವು ಪ್ರಮುಖವಾಗಿ ಒಂದು ಪ್ರಾದೇಶಿಕತೆ ಅಥವಾ ಸ್ಥಳೀಯತೆಗೆ ಸಂಬಂಧಿಸಿದಂತಹ ಅಲ್ಲಿನ ಜನರ ಜೀವನದ ಬದುಕಿನ ಕ್ರಮವನ್ನು ಅಲ್ಲಿನ ಪರಿಸರವನ್ನು ಮತ್ತು ಮನುಷ್ಯರು ತಮ್ಮ ತಿಳುವಳಿಕೆ-ಸಾಮರ್ಥ್ಯಗಳಿಂದ ಅದನ್ನೆದುರಿಸುವುದನ್ನು ಅರ್ಥೈಸುವುದನ್ನು ಕಾದಂಬರಿಗಳಲ್ಲಿ ತನ್ಮೂಲಕ ಸತ್ಯವನ್ನು ಹುಡುಕುವ ಪ್ರಯತ್ನಗಳನ್ನು ಕಾಣುತ್ತೇವೆ. ಮುಖ್ಯವಾಗಿ ಈ ನೆಲೆಯಿಂದ ನಾವು ಕಾದಂಬರಿಗಳಲ್ಲಿ ಪ್ರಾದೇಶಿಕತೆಯ ಸತ್ವ ಪಾತ್ರರಚನೆಯ ವೈವಿಧ್ಯತೆ ಮತ್ತು ಅದ್ಭುತವಾದಂತಹ ವಾಸ್ತವತೆಗಳನ್ನು ಮತ್ತು ಪರಿಸರ ವರ್ಣನೆಗಳನ್ನು ಗ್ರಹಿಸಬೇಕಾಗುತ್ತದೆ.

ಕುವೆಂಪುರವರು ತಮ್ಮ ಎರಡೂ ಕಾದಂಬರಿಗಳಲ್ಲಿ ಸೃಷ್ಟಿಸಿದ ಪುರುಷ ಪಾತ್ರಗಳು ವೈಚಾರಿಕತೆಯ ತಾತ್ವಿಕ ಪ್ರಜ್ಞೆಯನ್ನಿಟ್ಟುಕೊಂಡು ಬೆಳೆದಿರುವುದು ಗಮನಿಸಬೇಕಾದ ಅಂಶ. 'ಕಾನೂರು ಹೆಗ್ಗಡಿತಿ'ಯಲ್ಲಿನ ಹೂವಯ್ಯನ ಪಾತ್ರವು ನವೋದಯ ಕಾಲದ ಪರಿವರ್ತನೆಯ ಚೈತನ್ಯದ ಪ್ರತೀಕವಾಗಿದೆ. ಹೂವಯ್ಯ ವ್ಯಕ್ತಿ-ವ್ಯಕ್ತಿಗಳ ನಡುವಿನ ಸಂಬಂಧವೂ ಉತ್ತಮಗೊಳ್ಳಬೇಕೆಂದು ಆಶಿಸುತ್ತಾನೆ ಅಂದರೆ ಯಾವುದೇ ರೀತಿಯಾದಂತಹ ತೊಳಲಾಟಗಳಿಗೆ ಹಾಗೆಯೇ ಮಾನವ ಮತ್ತು ಪ್ರಕೃತಿಯ ಸಂಬಂಧಗಳಲ್ಲಿಯೂ ಸಹ ಅಷ್ಟೇ ಸೌಹಾರ್ದತೆಯು ಆಗಿರಬೇಕೆಂಬುದು ಕುವೆಂಪುರವರ ಆಶಯವಾಗಿದೆ.

ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕಂಡು ಬರುವಂತೆ ಮುಕುಂದಯ್ಯನು ಅಲ್ಲಿನ ಸ್ಥಳೀಯತೆಗೆ ತನ್ನನ್ನು ತಾನು ಒಗ್ಗಿಸಿಕೊಳ್ಳುವ ಮೂಲಕ ತನ್ನ ಜೀವನವನ್ನು ಸಾಗಿಸುತ್ತಾನೆ. ಇಲ್ಲಿ ಆ ಆದರ್ಶಕ್ಕಿಂತ ವಾಸ್ತವತೆ ಮುಖ್ಯ. ಮುಕುಂದಯ್ಯನಿಗೆ ಹೂವಯ್ಯನಲ್ಲಿರುವಂತಹ ಸಂಕಲ್ಪ ಶಕ್ತಿಯೂ ಇರುವುದಿಲ್ಲ. ಹಾಗೆಯೇ ಹೂವಯ್ಯನ ತಾತ್ವಿಕ ಬದ್ಧತೆಯನ್ನು ಸಹ ಅವನು ಹೊಂದಿಲ್ಲ.

'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳೆರಡೂ ಮಂದಗತಿಯಲ್ಲಿ ಅಂದರೆ ನಿಧಾನವಾಗಿ ಬದಲಾವಣೆಗೊಳ್ಳುತ್ತಿರುವಂತಹ ಗ್ರಾಮೀಣ ಸಮಾಜ ವ್ಯವಸ್ಥೆಯ ಸಂಪೂರ್ಣ ಸೂಕ್ಷ್ಮಾತಿಸೂಕ್ಷ್ಮ ವಿವರಗಳಿಂದ ಕೂಡಿದೆ. ಆ ಸಂದರ್ಭದಲ್ಲಿ ಅಂದಿನ ಸಮಾಜದಲ್ಲಿ ಕಂಡುಬರುವಂತಹ ಹಲವಾರು ಸಂಘರ್ಷಗಳ ಚಿತ್ರಣ ಇಲ್ಲಿ ಅರ್ಥಪೂರ್ಣವಾಗಿ ದಾಖಲೆಗೊಳ್ಳುತ್ತದೆ. ಒಟ್ಟಾರೆ ನಾವು ಎರಡೂ ಕಾದಂಬರಿಗಳಡಿಯಲ್ಲಿ ಮುಖ್ಯವಾಗಿ ಅಲ್ಲಿನ ಸ್ಥಳೀಯ ಸಂಸ್ಕೃತಿಯ ನೆನಪುಗಳನ್ನು ದಮನಗೊಳಿಸುವ ಮುಖೇನ ನೂತನವಾದ ಸಾಂಸ್ಕೃತಿಕ ವಿಚಾರಗಳನ್ನು ತರುವಲ್ಲಿ ಯಶಸ್ವಿಯಾಗುವ ವಸಾಹತುಶಾಹಿ ಧೋರಣೆಗಳ ಪ್ರಾಬಲ್ಯವನ್ನು ಕಾಣುತ್ತೇವೆ. ಈ ಮೂಲಕ ನೂತನವಾದ ವಿಚಾರಗಳು ಹೇಗೆ ಮಲೆನಾಡನ್ನು ಪ್ರವೇಶಿಸುತ್ತದೆ ಎಂಬುದನ್ನು ನಾವಿಲ್ಲಿ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಇದನ್ನೇ ಇನ್ನಷ್ಟು ವಿವರಿಸುವುದಾದರೆ,

ಸಮಾಜದ ವ್ಯವಸ್ಥೆಯಲ್ಲಿನ ಊಳಿಗಮಾನ್ಯದ ಸಂದರ್ಭ ಮತ್ತು ಕೆಳವರ್ಗದ ಸಂಬಂಧಗಳ ನಡುವೆ ಏರ್ಪಡುವಂತಹ ಪ್ರತಿಕ್ರಿಯೆಗಳನ್ನು ಪರಿಚಯಿಸುವ ಮುಖೇನ ಅಲ್ಲಿನ ಸಂಘರ್ಷಗಳ ಸ್ವರೂಪವನ್ನು ನಾವು ಇಲ್ಲಿ ಕಾಣುತ್ತೇವೆ. ಈ ವಿಚಾರಗಳು ಕುವೆಂಪುರವರ ಕಾದಂಬರಿಗಳಲ್ಲಿ ಪ್ರಕಟವಾಗಿರುವ ಬಗೆಯನ್ನು ಡಿ.ಆರ್ ನಾಗರಾಜ್, ಎಸ್. ಚಂದ್ರಶೇಖರ್, ಕೆ.ಸಿ.ಶಿವಾರೆಡ್ಡಿ ಮತ್ತು ರಾಜಾರಾಮ ಹೆಗಡೆ ಮೊದಲಾದವರು ಈ ಮೊದಲೇ ಸಾಕಷ್ಟು ವಿಮರ್ಶಾತ್ಮಕ ವಿಶ್ಲೇಷಣೆಗೆ ಒಳಪಡಿಸಿರುತ್ತಾರೆ. ಉದಾಹರಣೆಗೆ ಡಿ.ಆರ್.ನಾಗರಾಜ್‌ರವರ ಅಭಿಪ್ರಾಯ ಇಂತಿದೆ.

"..... ವರ್ಗಗಳು ಪ್ರಜ್ಞಾವಂತ ವರ್ಗಗಳಾಗಿ ರೂಪುಗೊಂಡು ಪ್ರಗತಿಪರ ಚಾರಿತ್ರಿಕ ಹೋರಾಟ ನಡೆಸುವುದು ಇಂತಹ ಸಮಾಜಗಳಲ್ಲಿ ಅಸಾಧ್ಯ ಕೂಡ. ತುಂಬಿ ತುಳುಕುವ ದಾರಿದ್ರ್ಯವಿದ್ದರೂ, ಶೋಷಣೆಯಿದ್ದರೂ ಒಂದು ವರ್ಗ ತನಗಾಗಿ ಇದನ್ನು ಪ್ರತಿಭಟಿಸುವುದು ಸಾಧ್ಯವಾಗುವುದಿಲ್ಲ. ಬಂಡವಾಳಶಾಹಿ ಪೂರ್ವದ ಈ ಸಮಾಜ ವ್ಯವಸ್ಥೆಗಳಲ್ಲಿ ವಾಸ್ತವ ವ್ಯವಸ್ಥೆ ಮತ್ತು ನ್ಯಾಯಬದ್ಧ ವ್ಯವಸ್ಥೆಗಳ ನಡುವೆ ಘರ್ಷಣೆ ಖಚಿತವಾಗಿ ರೂಪುಗೊಂಡಿರುವುದಿಲ್ಲ. ಇಲ್ಲಿರುವ ಅಶಾಂತಿಯ ಸಂಘರ್ಷದ ಸ್ವರೂಪವೇ ಬೇರೆ. ಇದನ್ನೇ ಉಳಿಗಮಾನ್ಯ. ಪದ್ಧತಿಯೊಳಗೆ ನಡೆಯುವ 'ಮೌನ ಸಂಘರ್ಷ' ಎನ್ನುವುದು. ತತ್ವಜ್ಞಾನಿ ಹೂವಯ್ಯ ಗುರುತಿಸಿಲ್ಲದ ಈ ಸಂಘರ್ಷವನ್ನು ಕಲಾವಿದ ಕುವೆಂಪು ಗುರುತಿಸಿದ್ದಾರೆ.

"..... ಅಂದರೆ ನಾನು ಮೇಲೆ ಹೇಳಿದ ಅಶಾಂತಿಯ, ಮೌನ ಸಂಘರ್ಷದ ಜ್ವಾಲಾಮುಖಿಗಳು ಕಾದಂಬರಿಯ ಮುಖ್ಯಸತ್ವ ಪ್ರತಿಯೊಂದು ಘಟನೆಯೂ ಇಲ್ಲಿ ವರ್ಗ ಸಂಬಂಧಗಳ ಹಿನ್ನಲೆಯಲ್ಲಿಯೇ ನಡೆಯುತ್ತಿದೆ. .... ಅಷ್ಟೇ ಅಲ್ಲದೆ, ಜಾತಿ ಪದ್ಧತಿಯ ತೆಕ್ಕೆಯಿಂದ ಬಿಡಿಸಿಕೊಳ್ಳಲು ಬ್ರಾಹ್ಮಣೇತರ ಜಾತಿಗಳು ನಡೆಸುತ್ತಿದ್ದ ಪ್ರಯತ್ನದ ಚಿತ್ರಣವೂ ಇಲ್ಲಿ ಅತ್ಯಂತ ಮಾರ್ಮಿಕವಾಗಿ ಬಂದಿದೆ. ಕ್ರೈಸ್ತ ಮತವನ್ನು ಒಪ್ಪಿಕೊಳ್ಳುವುದೆಂದರೆ ಸಾಮಾಜಿಕ ಚಲನೆಗೆ ಏಣಿ ಇದ್ದಂತೆ ಎಂಬ ತಿಳುವಳಿಕೆ ಇಲ್ಲಿಯ ಮತಾಂತರದ ಹಿಂದಿರುವಶಕ್ತಿ."[3]

ಸಂಸ್ಕೃತಿಯ ಹಲವು ನೆನಪುಗಳನ್ನು ನಾಶಗೊಳಿಸುವ ಮೂಲಕ ಆಯಾಯ ಸ್ಥಾನದಲ್ಲಿ ನೂತನವಾದ ಹೊಸದಾದಂತಹ ಸಾಂಸ್ಕೃತಿಕ ರಚನೆಗಳನ್ನು ತಂದಿರಿಸಿರುವುದನ್ನು ನಾವು ಬಹಳ ಪ್ರಮುಖವಾಗಿ ವಸಾಹತು ಧೋರಣೆಗಳ ಮುಖ್ಯ ಗುರಿಯಾಗಿ ಗುರ್ತಿಸಬಹುದಾಗಿದೆ. ಈ ಧೋರಣೆ ಇಲ್ಲಿ ಮಲೆನಾಡನ್ನು ಅಂದರೆ ಮಲೆನಾಡಿನಲ್ಲಿ ವಾಸಿಸುವ ಜನರ ಜೀವನವನ್ನು ಪ್ರವೇಶಿಸಿತು ಎಂಬುದನ್ನು ಗಮನಿಸಬೇಕಾಗುತ್ತದೆ. ಈ ಮೂಲಕ ಅನ್ಯ ಸಂಸ್ಕೃತಿಯಿಂದ ಬದಲಾದಂತಹ ಪ್ರಜ್ಞೆಯ ಮುಖೇನ ಸಮಾಜದ ಪರಿಸರವನ್ನು ಹೇಗೆ ಪ್ರವೇಶಿಸುತ್ತದೆ ಎಂಬುದನ್ನು ತಿಳಿಯುವುದು ಇಲ್ಲಿ ಮುಖ್ಯವಾಗುತ್ತದೆ. ಈ ಎರಡೂ ಕಾದಂಬರಿಗಳಡಿಯಲ್ಲಿ ನಾವು ಗ್ರಹಿಸಬಹುದಾಗಿರುತ್ತದೆ.

ಅಪರಿಚಿತವಾದಂತಹ ಅಥವಾ ನೂತನವಾದಂತಹ ವಸ್ತುಗಳು ಮಲೆನಾಡನ್ನು ಪ್ರವೇಶಿಸಿದಂತಹ ಸಂದರ್ಭದಲ್ಲಿ ಅಲ್ಲಿನ ಸ್ಥಳೀಯರ ಮೇಲೆ ಅದು ಯಾವ ರೀತಿಯಾದಂತಹ ಒಂದು ಪರಿಣಾಮವನ್ನು ಬೀರಿತು ಮತ್ತು ಅದರಿಂದ ಅಲ್ಲಿನ ಜನರ ಒಂದು ಮಾನಸಿಕ ಯಾತನೆ, ಭಯ, ಸಂಭ್ರಮಗಳು ಯಾವ ರೀತಿಯಲ್ಲಿ ಮಲೆನಾಡನ್ನು ಆವರಿಸಿತು ಎಂಬುದನ್ನು ಈ ಹಿನ್ನೆಲೆಗಳಲ್ಲಿ ಗ್ರಹಿಸಬೇಕಾಗುತ್ತದೆ. ಬ್ರಿಟಿಷರು ಇಲ್ಲಿನ ಸಾಂಸ್ಕೃತಿಕ ಜೀವನದ ಮೇಲೆ ತಮ್ಮ ಒಂದು ಯಜಮಾನ್ಯವನ್ನು ನೆಲೆಗೊಳಿಸಿದ ಕಾರಣದಿಂದ ಉಂಟಾದಂತಹ ಸಂಘರ್ಷವನ್ನು ಸಹ ಹೀಗೆಯೆ ಗ್ರಹಿಸಬಹುದಾಗಿದೆ.

ತೀರ್ಥಹಳ್ಳಿಯ ಪಾದ್ರಿಯಾದಂತಹ ಜೀವರತ್ನಯ್ಯನು ಬೆಟ್ಟಳ್ಳಿ ದೇವಯ್ಯನಿಗೆ ಅಪರಿಚಿತವಾದಂತಹ ಬೈಸಿಕಲ್ಲನ್ನು ಪರಿಚಯಿಸುವುದಲ್ಲದೆ ಅದನ್ನು ಮೊದಲಿಗೆ ಆತನಿಗೆ ಕಲಿಸುವ ವಿಷಯವೂ ಇಡೀ ಸುತ್ತಮುತ್ತಲಿನ ಹಳ್ಳಿಗಳಿಗೆ ಹಬ್ಬಿತ್ತು. ಇಲ್ಲಿ ಮುಖ್ಯವಾಗಿ ನಾವು

ಗುರ್ತಿಸಬಹುದಾದಂತಹ ಅಂಶವೇನೆಂದರೆ ಅಪರಿಚಿತವಾದಂತಹ ಒಂದು ಬೈಸಿಕಲ್ಲಿಗೆ ಅಲ್ಲಿನ ಜನರು ಅಸಂಖ್ಯವಾದಂತಹ ರೀತಿಯಲ್ಲಿ ಪ್ರತಿಕ್ರಿಯಿಸಿದರು. ಮತ್ತು ಮನೋವಲಯವನ್ನು ವಿಸ್ತರಿಸಿಕೊಂಡರು ಎಂಬುದು ತಿಳಿಯಬೇಕಾಗುತ್ತದೆ. ಏಕೆಂದರೆ ಬೈಸಿಕಲ್ಲು ಒಂದು ಸಾಮಾನ್ಯ ಸಂಗತಿಯಾದರೂ ಸಾಂಕೇತಿಕವಾಗಿ ಅದರ ಅರ್ಥ ಹೆಚ್ಚು.

ಇದೊಂದೇ ಅಲ್ಲ, ಆಧುನಿಕವಾದಂತಹ ಒಂದು ವಸ್ತುವಿನ ಪರಿಚಯದಿಂದಾಗಿ ಆ ವಸ್ತುವಿನ ಬಗೆಗೆ ಒಂದು ರೀತಿಯಾದಂತಹ ಕುತೂಹಲಗಳಿಗೆ ಮತ್ತು ಸಂಭ್ರಮಗಳಿಗೆ ಅಲ್ಲಿನ ಜನರು ಮುಳುಗಿ ಹೋಗುತ್ತಾರೆ. ಬೈಸಿಕಲ್ಲಿನ ಜೊತೆಗೆ ಗಡಿಯಾರ, ಲಾಟೀನು ಮುಂತಾದಂತಹ ಆಧುನಿಕ ಯಂತ್ರೋಪಕರಣಗಳ ಪ್ರವೇಶವನ್ನು ಮಾಡಿಸುವ ಮುಖಾಂತರ ಅಲ್ಲಿನ ಜನರ ಜೀವನದ ಕ್ರಮದಲ್ಲಿ ಸ್ವಲ್ಪ ಏರ್ಪಾಡುಗಳನ್ನು ತರುವ ಸಲುವಾಗಿ ಪಾದ್ರಿ ಜೀವರತ್ನಯ್ಯ ಅಲ್ಲಿನ ಸ್ಥಳೀಯರನ್ನು ಮತಾಂತರಗೊಳಿಸುವಲ್ಲಿ ಮಾಡಿದಂತಹ ಪ್ರಯತ್ನಗಳು ಹಾಗೂ ಜನರ ಮನಸ್ಸಿನ ಪರಿವರ್ತನೆಗಾಗಿ ಆತನ ಹೂಡಿದಂತಹ ತಂತ್ರಗಳು ಇವೆಲ್ಲವನ್ನು ನಾವು ಈ ದೃಷ್ಟಿಯಿಂದ ಗಮನಿಸಬಹುದಾಗಿದೆ. ಅಲ್ಲಿ ಜನರನ್ನು ಬಲಾತ್ಕಾರವಾಗಿ ಮತಾಂತರಗೊಳಿಸುವ ಪ್ರಯತ್ನವನ್ನು ಪಾದ್ರಿ ಜೀವರತ್ನಯ್ಯ ಮಾಡಿರುವಂತಹ ಸನ್ನಿವೇಶಗಳನ್ನು ಹೀಗೆಯೆ ನೋಡಬಹುದಾಗಿದೆ.

"ದೇವಯ್ಯನ ಆಜ್ಞೆಯಂತೆ ಏಳೆಂಟು ಮಾರು ಉದ್ದದ ಒಂದು ಗಳುವನ್ನು ತಂದು ಬೈಸಿಕಲ್ಲಿನ ಹ್ಯಾಂಡ್ಲಿಗೆ ಜೋಡಿಸಿ, ಬಳ್ಳಿಗಳಿಂದ ಬಿಗಿದು ಸುತ್ತಿದರು. ದೂರನಿಂತು ನೋಡುತ್ತಿದ್ದವರಲ್ಲಿ ಐದಾರು ಆಳುಗಳನ್ನು ಬಳಿಗೆ ಕರೆದರು. ತಿಮ್ಮಿಯ ಅಪ್ಪ ದೊಡ್ಡ ಬೀರನಾದಿಯಾಗಿ ನಾ ಮುಂದು, ತಾ ಮುಂದು ಎಂದು ತವಕಿಸಿ ಬಂದವರನ್ನು ಗಾಡಿಯ ನೊಗಕ್ಕೆ ಎತ್ತು ಕಟ್ಟುವಂತೆ, ಆ ಕಡೆ ಮೂವರನ್ನು ಈ ಕಡೆ ಮೂವರನ್ನು ಆಳುವಿಗೆ ಕೈಗೊಡುವಂತೆ, ಮಾಡಿದರು. ಅತ್ತಿತ್ತ ಅಲ್ಲಾಡದೆ ನೆಟ್ಟಗೆ ನಿಂತ ಬೈಸಿಕಲ್ಲಿನ ಸೀಟಿಗೆ ದೇವಯ್ಯ ಧೈರ್ಯವಾಗಿ ಹತ್ತಿಕೂತನು. ಗಳು ಹಿಡಿದವರು ಬೈಸಿಕಲ್ಲನ್ನು ಎಳೆದುಕೊಂಡು ಹೊರಟರು. ಗಳುವಿಗೆ ಭದ್ರವಾಗಿ ಕಟ್ಟಿದ್ದ ಹ್ಯಾಂಡಲ್ ತಿರುಗುವ ಸಂದರ್ಭವೇ ಇರಲಿಲ್ಲ. ಅದು ಗಳು ಹಿಡಿದವರ ವಶವಾಗಿ ಅವರು ಎಳೆದಷ್ಟೆ ವೇಗದಲ್ಲಿ ಅವರು ಎಳೆದತ್ತ ಹೋಗುತ್ತಿತ್ತೇ ವಿನಾ ದೇವಯ್ಯನ ವಶದಲ್ಲಿರಲಿಲ್ಲ. ಆದರೆ ಬೈಸಿಕಲ್ಲು ಹೋಗುವ ಅಥವಾ ಬೀಳುವ ಭಯ ಒಂದಿನಿತೂ ಇರದ ಅವನು ದಂಡಿಗೆಯ ಮೇಲೆ ಕುಳಿತಂತೆ ಖುಷಿಯಾಗಿ ಸವಾರಿ

ಮಾಡುತ್ತಿದ್ದನು ಆದರೆ ಪಾದ್ರಿಗೆ ಗೊತ್ತಿತ್ತು. ಅದರ ಪ್ರಯೋಜನ ಬರಿಯ ನಲಿಯುವಿಕೆಯಾಗಿತ್ತು ಹೊರತು ಕಲಿಯುವಿಕೆ ಆಗಿರಲಿಲ್ಲ"[4]

ಮುಖ್ಯವಾಗಿ ನಾವು ಪಾದ್ರಿಯ ಮೂಲಕ ಯಾವ ರೀತಿಯಲ್ಲಿ ಹಿಂದೂ ಧರ್ಮದವರು ಅನ್ಯ ಧರ್ಮದ ಸೆಳೆತಕ್ಕೆ ಒಳಗಾದರು ಎಂಬುದನ್ನು ಗ್ರಹಿಸಬೇಕು ಸ್ಪಷ್ಟವಾಗಿ ಹೇಳುವುದಾದರೆ ಸನಾತನ ಧರ್ಮದ ಹಿಡಿತದಿಂದ ತಮ್ಮ ಆಸ್ತಿತ್ವವನ್ನು ಕಳೆದುಕೊಂಡಿದ್ದಂತಹ ಗ್ರಾಮ ಸಮಾಜವು ಯಾವ ರೀತಿಯಲ್ಲಿ ಇನ್ನೊಂದು ವ್ಯವಸ್ಥೆಗೆ ಬಲಿಯಾಗುತ್ತದೆ ಎಂಬುದನ್ನು ಇಲ್ಲಿ ತಿಳಿಯಬೇಕಾಗುತ್ತದೆ. ಪ್ರಮುಖವಾಗಿ ವಸಾಹತುಶಾಹಿ ಹೊತ್ತು ತಂದಂತಹ ಕ್ರೈಸ್ತಮತದ ಪ್ರಚಾರ ಹಾಗೂ ಅವರು ಕೈಗೊಂಡಿರುವಂತಹ ಕಾರ್ಯ ಯೋಜನೆಗಳನ್ನು ನಾವು ವಸಾಹತುಶಾಹಿಯ ಹಿನ್ನಲೆಯಲ್ಲಿಯೇ ನೋಡಬೇಕಾಗುತ್ತದೆ. ಒಟ್ಟಾರೆಯಾಗಿ ಸ್ಥಳೀಯರನ್ನು ಮತ್ತು ಅಲ್ಲಿನ ಪರಿಸರವನ್ನು ಪ್ರವೇಶಿಸುವ ಮುಖಾಂತರ ಅಲ್ಲಿ ಸ್ವಲ್ಪ ಬದಲಾವಣೆಗಳನ್ನು ಉಂಟುಮಾಡುವ ಮುಖೇನ ನೂತನವಾದ ವಿಚಾರಗಳನ್ನು ಹೇರುವ ಮೂಲಕ ಅಲ್ಲಿನ ಜನರಿಗೆ ಹಾಗೂ ಅವರ ಜೀವನ ಕ್ರಮದಲ್ಲಿ ಸ್ವಲ್ಪ ಬದಲಾವಣೆಯನ್ನು ತರುವ ಪ್ರಯತ್ನವನ್ನು ಮಾಡಿರುತ್ತಾರೆ. ಎಂಬುದನ್ನು ಗುರ್ತಿಸಲಾಗಿದೆ. ಅದರ ಪ್ರಭಾವಕ್ಕೆ ಒಳಗಾಗುವುದನ್ನು ಕುವೆಂಪುರವರು ಕಾದಂಬರಿಯಲ್ಲಿ ಈ ರೀತಿಯಾಗಿ ತಿಳಿಯ ಹೇಳಿರುತ್ತಾರೆ.

ಕುವೆಂಪುರವರ ನಿಲುವುಗಳಿಗೆ ಪೂರಕವಾಗಿ ವಿವೇಕಾನಂದರ ವಿಚಾರಗಳನ್ನು ಕಾದಂಬರಿಯಲ್ಲಿ ನಾವು ನೋಡಬಹುದಾಗಿದೆ. ಮಲೆನಾಡಿಗೆ ಬಂದಂತಹ ಕ್ರೈಸ್ತ ಪಾದ್ರಿಯಾದ ಜೀವರತ್ನಯ್ಯನ ಮೂಲಕ ಪ್ರಾರಂಭವಾದಂತಹ ಹೊಸ ಇಂಗ್ಲೀಷ್ ಶಾಲೆಯ ಬಗೆಗೆ ಹಾಗೂ ಅದರ ಮುಖಾಂತರವಾಗಿ ಒಡಮೂಡಿ ಬರುವ ಆಧುನಿಕವಾದ, ಮಾನವೀಯವಾದ, ವಿಚಾರಧಾರೆಗಳ ಬಗ್ಗೆ ಅದರಲ್ಲಿ ಕಂಡು ಬರುವಂತಹ ಪುರೋಹಿತಶಾಹಿಯ ಜಾತೀಯತೆಯ ಅಂದರೆ ಜಾತಿಭೇದಗಳಿಗೆ ಸಂಬಂಧಿಸಿದಂತೆ ಮೌಢ್ಯಗಳನ್ನು ಖಂಡಿಸುವುದಕ್ಕೆ ಸಂಬಂಧಿಸಿದಂತೆ ಹಾಗೂ ಸನಾತನ ಧರ್ಮದಿಂದ ಹೊರಟು ನೂತನವಾದ ಅಂದರೆ ಅನ್ಯ ಧರ್ಮಕ್ಕೆ ಮತಾಂತರಗೊಳ್ಳುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ಒಟ್ಟಾರೆಯಾಗಿ ಎಲ್ಲವನ್ನು ಸಹ ಕುವೆಂಪುರವರು ಪ್ರಜ್ಞಾಪೂರ್ವಕವಾಗಿಯೇ ನಿರಾಕರಿಸುತ್ತಾರೆ. ಎಂಬುದನ್ನು ನಾವು ಗ್ರಹಿಸಬಹುದಾಗಿದೆ. ಕುವೆಂಪುರವರು ತಮ್ಮ ಕಾದಂಬರಿಯಲ್ಲಿ ಮಾನವೀಯವಾದಂತಹ ಮೌಲ್ಯಗಳನ್ನು ಅಮಾನವೀಯಗೊಳಿಸಿದಂತಹ ಪುರೋಹಿತಶಾಹಿ ಧೋರಣೆಗಳನ್ನು

ನವನಾಗರೀಕತೆಗೆ ಸಂಬಂಧಿಸಿದಂತೆ ಆಧುನಿಕವಾಗಿ ಪುನರ್ ವ್ಯಾಖ್ಯಾನೆಗಳಿಗೆ ಒಳಪಡಿಸುವಲ್ಲಿ ಅವರ ಸಂವೇದನೆಗಳು ಮುಖ್ಯವಾಗುತ್ತವೆ.

ಹಿಂದೂ ಮತ್ತು ಕ್ರೈಸ್ತ ಪುರೋಹಿತಶಾಹಿಯ ಮತೀಯ ಧೋರಣೆಗಳಿಗೆ ಸಂಬಂಧಿಸಿದಂತೆ ಹಾಗೂ ಮತಾಂತರಗಳಿಗೆ ಸಂಬಂಧಿಸಿದಂತೆ ಕುವೆಂಪುರವರು ತಮ್ಮ ಪ್ರಶ್ನೆಗಳನ್ನು ಮುಂದಿಡುತ್ತಾರೆ. ಆದರೆ ಕ್ರೈಸ್ತ ಪಾದ್ರಿಗಳಿಂದ ಮಲೆನಾಡನ್ನು, ಪ್ರವೇಶಿಸಿದಂತಹ ಆಧುನಿಕವಾದ ಶಾಲೆಯಾಗಿರಬಹುದು, ಯಂತ್ರಗಳಾಗಿರಬಹುದು, ವೈದಕೀಯ ಮತ್ತು ವೈಚಾರಿಕ ವಿಚಾರಗಳನ್ನು ಸ್ವಾಗತಿಸುವ ಮುಖಾಂತರ ಹಿಂದೂ ಧರ್ಮವನ್ನು ಪರಿಷ್ಕರಣಗೊಳಿಸುವುದರ ಕಡೆಗೆ ಒಲವು ತೋರಿರುವುದನ್ನು ಹಾಗೂ ನಾವು ಕಾದಂಬರಿಯಲ್ಲಿ ಕಂಡು ಬರುವಂತಹ ಕಲ್ಲೂರ ಬಳಿಯ ಗಡ್ಡದಯ್ಯ ವಿವೇಕಾನಂದರ ಅನುಯಾಯಿ ಆಗಿದ್ದು, ಕ್ರೈಸ್ತ ಧರ್ಮದ ಮತಾಂತರಕ್ಕೆ ವಿರುದ್ಧವಾಗಿ ಹಿಂದೂ ಧರ್ಮದ ಉತ್ತಮ ತತ್ವದರ್ಶಗಳನ್ನು ಸಮರ್ಪಿಸುವ ಪ್ರಸಂಗದಲ್ಲಿ ನೋಡಬಹುದಾಗಿದೆ. ಸ್ಥಳೀಯ ಪುರೋಹಿತಶಾಹಿಯ ಗೊಡ್ಡು ಆಚರಣೆಗಳ ಹಾಗೂ ಮೌಢ್ಯತೆಗಳ ವಿರುದ್ಧ ನಿಂತು ಕ್ರೈಸ್ತ ಮತದ ವಸಾಹತುಶಾಹಿ ಪ್ರಭಾವಕ್ಕೆ ಒಳಗಾದ ದೇವಯ್ಯನವರ ನಡುವಿನ ಮುಖಾಮುಖಿ ಸನ್ನಿವೇಶವೂ ಕೆಲವೊಂದು ವಿಚಾರಗಳನ್ನು ತಿಳಿಯಪಡಿಸುತ್ತದೆ.

"…..ಆಗಿನ ಕಾಲದ ಅವಿಭಕ್ತ ಕುಟುಂಬದ ಹಿಂದೂ ಸ್ತ್ರೀಗೆ ಸಹಜವಾಗಿದ್ದ ಅನಿವಾರ್ಯ ಮಹೌದಾರ್ಯದಿಂದ, ಕ್ಷಮಿಸುವ ಮಾತ್ರ ಅಲ್ಲದೆ ಒಪ್ಪಿಕೊಳ್ಳಲು ಸಿದ್ಧವಾಗಿದ್ದ ದೇವಮ್ಮ ಆತನು ಮತಾಂತರಗೊಳ್ಳುವುದನ್ನು ಮಾತ್ರ ಸಹಿಸಲು ಸಿದ್ಧಳಾಗಿರಲಿಲ್ಲ. ಆರ್ಷೇಯ ಕಾಲದಿಂದಲೂ ಬಂದಿದ್ದ ತನ್ನ ಪೂರ್ವಕರ ದೇವರುಗಳನ್ನಾಗಲಿ, ಆಚಾರಗಳನ್ನಾಗಲಿ, ಶ್ರದ್ಧೆಯನ್ನಾಗಲಿ, ಪೂಜೆ ಪುರಸ್ಕಾರ ರೀತಿಗಳನ್ನಾಗಲಿ, ಸಾಮಾಜಿಕ ಬಂಧು ಬಾಂಧವರನಾಗಲಿ, ಸಂಪ್ರದಾಯ ಸಂಸ್ಕೃತಿಗಳನ್ನಾಗಲಿ ತ್ಯಜಿಸಿ, ಲಂಗರು ಕಡಿದ ಹಡಗಿನಂತೆ ಕಾಣದ ಕಡಲಿಗೆ ಕೊಚ್ಚಿ ಹೋಗುವುದು ಅವಳ ಜೀವಕ್ಕೆ ಒಪ್ಪಿಗೆಯಾಗಿರಲಿಲ್ಲ… ಸಿಂಧುವಳ್ಳಿಯ ಚಿನ್ನಪ್ಪಗೌಡರು ಕಿಲಸ್ತರಾದ ಮೇಲೆ ಅವರ ಹೆಂಡತಿಗೆ ಒದಗಿದ್ದ ದುರಂತ ಗತಿಯ ವಿಚಾರವನ್ನು ಕೇಳಿದ್ದ ಅವಳಿಗೆ, ಗಂಡನನ್ನು ಮತಾಂತರ ಹೊಂದುವುದಕ್ಕೆ ಬಿಡುವ ಮುನ್ನ ತಾನು ತನ್ನ ಶಿಶುವಿನೊಡನೆ ಮೃತ್ಯುವನ್ನಪ್ಪುವುದೆ ಶ್ರೇಯಸ್ಕರ ಎಂದು ತೋರಿತ್ತು. ತನ್ನ ಹಣೆಯ ಕುಂಕುಮದೊಡನೆ ತನ್ನ ಗಂಭೀರವಾದ ಹಿಂದೂ ಹೆಸರನ್ನು ಅಳಿಸಿ, ಕಿವಿಯಿಂದ ಕೇಳಬಾರದು ಅಂತಹ ಕುಲಗೆಟ್ಟ ಅಸಹ್ಯ

ಹೆಸರನ್ನಿಡುವ ಆ ಮತಕ್ಕೆ ಸೇರುವುದುರ ಬದಲು ಬೆಂಕಿಗೆ ಹಾರುವುದೇ ಎಷ್ಟೋ ಸಹ್ಯವೂ ಸುಖಕರವೂ ಆಗಿ ಕಂಡಿತ್ತು. ತನ್ನ ಗಂಡನು ಪಾದ್ರಿಯ ಮಗಳೊಡನೆ ಸಂಬಂಧ ಬೆಳಸಿದ್ದಾನೆ ಎಂಬ ಗುಸುಗುಸು ಸುದ್ದಿ ಅವಳ ಕಿವಿಗೆ ಬಿದ್ದಿದ್ದಾಗ ಗರತಿ ಹೆಣ್ಣು ಸಂಕಟಪಟ್ಟುಕೊಳ್ಳುವಂತೆ ದುಃಖಿಯಾಗಿದ್ದಳು ಆದರೆ ಗಂಡಸರ ಹಣೆಯ ಬರಹವೇ ಹಾಗೆ. ನನ್ನ ಗಂಡ ಒಬ್ಬನನ್ನೆ ಲೇರೆಯ ರೀತಿಯಲ್ಲಿ ನಡೆ ಎಂದರೆ ನಡೆಯುತ್ತಾನೆಯೆ? ಭಗವಂತ ನನ್ನ ತಾಳಿ ಕೆಡದಂತೆ ಕಾಪಾಡಿದರೆ ಸಾಕು! ಎಂದು ಸಮಾಧಾನ ತಂದುಕೊಂಡಿದ್ದಳು. .....[5]

ಹಿಂದಿನ ಕಾಲದಿಂದಲೂ ಬಂದಿದ್ದಂತಹ ಧಾರ್ಮಿಕ ಆಚಾರ-ವಿಚಾರಗಳನ್ನು ಮತ್ತು ನಂಬಿಕೆಗಳನ್ನು ತತ್‌ಕ್ಷಣ ತ್ಯಜಿಸುವ ಮುಖಾಂತರ ಮತ್ತೊಂದು ಧರ್ಮಕ್ಕೆ ಮಾರುಹೋಗುವುದು ಕಷ್ಟಕರ ಸಂಗತಿ ಎಂಬುದನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ.

ಯಾವುದೇ ರೀತಿಯಾದಂತಹ ಹೊಸ ಧರ್ಮವನ್ನು ಸ್ವೀಕರಿಸುವುದು ಅದರ ಮೂಲಕ ಜೀವನ ಕ್ರಮವನ್ನು ಬದಲಾಯಿಸಿಕೊಳ್ಳುವುದು ಅಪರಾಧವೇ ಸರಿ ಎಂಬುವುದಾಗಿ ನಂಬಿ ಮಲೆನಾಡಿನ ಜನರು ಮತಾಂತರದ ವಿಚಾರಕ್ಕೆ ಮೊದಲು ಮಾರು ಹೋದಂತೆ ಕಂಡು ಬಂದರೂ ಕೂಡ ಅಂತಿಮವಾಗಿ ಸಂಪೂರ್ಣವಾಗಿ ವಸಾಹತುಶಾಹಿಯ ಮುಖೇನ ಬಂದಂತಹ ಕ್ರೈಸ್ತಧರ್ಮವನ್ನು ಸ್ವೀಕರಿಸದೆ ನಿರಾಕರಿಸುವುದನ್ನು ಕೂಡ ಕಾಣುತ್ತೇವೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಗಟ್ಟದ ತಳಗಿನಿಂದ ಬಂದಂತಹ ಆಳುಗಳಲ್ಲಿ ಐತ-ಪೀಂಚಲು ಗುರ್ತಿಸಿದ ಹಾಗೆ ಹೆಂಡತಿ ಮತ್ತು ಮಕ್ಕಳನ್ನು ಹೊಂದಿದ ದೇವಯ್ಯನವರು ಯಾವ ಕಾರಣಕ್ಕಾಗಿ ಮತಾಂತರಗೊಳ್ಳುತ್ತಾರಂತೆ ಎನ್ನುವಂತಹ ಸಂಭಾಷಣೆಯನ್ನು ಇಲ್ಲಿ ಗ್ರಹಿಸಬಹುದಾಗಿದೆ ಅಂತೆಯೇ ದೇವಯ್ಯನು ಒತ್ತಾಯದಿಂದ ಮತಾಂತರಗೊಂಡ ಮೇಲೆ ಅನುಭವಿಸುವ ತೊಳಲಾಟ ಹಾಗೂ ಜನಾಂಗದ ತಿರಸ್ಕಾರದ ಮಾತುಗಳನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಸನಾತನ ಭಾರತ ದೇಶದಲ್ಲಿ ಹುಟ್ಟಿ ಬೆಳೆದು ಬಂದಂತಹ ಮಾನವೀಯ ತತ್ವಗಳನ್ನು ದರ್ಶನಗಳನ್ನು ಮರೆಮಾಚಿಸುವ ಮುಖೇನ ಜನತೆಯಲ್ಲಿ ಮೌಢ್ಯತೆಯನ್ನು ಹೆಚ್ಚಿಸುವಂತಹ ಅಂಶಗಳನ್ನು ಕಾಣಬಹುದು ಆದರೆ ಪುರೋಹಿತಶಾಹಿ ವ್ಯವಸ್ಥೆಯನ್ನು ಪರಮಹಂಸ ಮತ್ತು

ವಿವೇಕಾನಂದರ ಸಂವೇದನೆಗಳು ತೀವ್ರವಾಗಿ ಖಂಡಿಸಿರುವುದನ್ನು ಸಹ ನಾವು ಕಾದಂಬರಿಯಲ್ಲಿ ಗ್ರಹಿಸಬಹುದಾಗಿದೆ. ಪೌರಾತ್ಯ ಮತ್ತು ಪಾಶ್ಚಾತ್ಯರ ಮೌಲ್ಯಗಳನ್ನು ಮುಖಾಮುಖಿಮಾಡಿಸುವುದರ ಮೂಲಕ ವಿವೇಕಾನಂದರು ಯಾವ ರೀತಿಯಲ್ಲಿ ಕ್ರೈಸ್ತ ಪುರೋಹಿತಶಾಹಿಯ ಮತಾಂತರದ ಕಾರ್ಯವನ್ನು ಸಂಪೂರ್ಣವಾಗಿ ಖಂಡಿಸುತ್ತಾರೆ ಎಂಬುದಕ್ಕೆ ಇದು ದ್ಯೋತಕವಾಗಿದೆ. ಈ ಮೂಲಕ ಸರ್ವಧರ್ಮ ಸಮನ್ವಯದ ದೃಷ್ಟಿಯನ್ನು ಬೆಳೆಸಿಕೊಳ್ಳಲು ಪ್ರೇರೇಪಿಸಿದರು ಎಂಬುದು ಗಮನಾರ್ಹವಾದುದಾಗಿದೆ.

ಕುವೆಂಪುರವರ ಕಾದಂಬರಿಗಳಲ್ಲಿ ಕಂಡುಬರುವಂತಹ ಪುರೋಹಿತಶಾಹಿಗೆ ಸಂಬಂಧಿಸಿದಂತೆ ಹಾಗೂ ವಸಾಹತುಶಾಹಿಯ ಸಂಸ್ಕೃತಿಗೆ ಸಂಬಂಧಿಸಿದಂತೆ ಕೆಲವೊಂದು ಅಮಾನವೀಯವಾದಂತಹ ವಿಚಾರಗಳನ್ನು ಚಿಂತನೆಗೆ ಒಳ ಪಡಿಸಬಹುದು. ಈ ವಿಚಾರಕ್ಕೆ ಸಂಬಂಧಿಸಿದಂತೆ ನಾವು ಶಿವಾರೆಡ್ಡಿಯವರ ಈ ಕೆಳಗಿನ ಮಾತುಗಳನ್ನು ಅಥವಾ ವಿಚಾರಗಳನ್ನು ಸ್ಮರಿಸಿಕೊಳ್ಳಬಹುದಾಗಿದೆ.

"ವಸಾಹತುಶಾಹಿ ಸಂಸ್ಕೃತಿಗೆ ಸಂಪೂರ್ಣವಾಗಿ ದೇಶವು ಅಧೀನವಾದ ಕಾಲಮಾನದಲ್ಲಿ ಬರವಣಿಗೆಯಲ್ಲಿ ತೊಡಗಿದ ಕುವೆಂಪು ಅವರು ಆ ಸಂಸ್ಕೃತಿಯ ಆಕರ್ಷಣೆ – ವಿಕರ್ಷಣೆಗಳಿಗೆ ಒಳಗಾದದ್ದು ಆ ಕಾಲಮಾನದ ಚಾರಿತ್ರಿಕ ಸಂಗತಿಗಳ ವಾಸ್ತವೀಕತೆಯನ್ನು ಸೂಚಿಸುತ್ತದೆ. ಅಂದರೆ ವಸಾಹತುಶಾಹಿ ಸಂಸ್ಕೃತಿಯ ಹೊಸ ವಿಚಾರಗಳನ್ನು ಕುವೆಂಪು ಅವರಂತೆಯೇ ಆ ಕಾಲದ ಅನೇಕರನ್ನು ಆಕರ್ಷಿಸಿದ್ದವು. ಹಾಗಿದ್ದೂ ಕುವೆಂಪು ಅವರ ಸಂವೇದನೆ ಸಾಂಪ್ರದಾಯಕ ವೈದಿಕ ಸಂಸ್ಕೃತಿ ಹಾಗೂ ವಸಾಹತು ಸಂಸ್ಕೃತಿಗಳಿಗೆ ಏಕಕಾಲದಲ್ಲಿ ಮುಖಾಮುಖಿಯಾದ ಬಗೆ ಕನ್ನಡ ಸಾಹಿತ್ಯದಲ್ಲಿಯೇ ಹೆಚ್ಚು ಗಂಭೀರವಾದುದ್ದಾಗಿದೆ. ಪುರೋಹಿತಶಾಹಿಯ ನಿರ್ಮಿತಿಗಳಿಂದ ಮತಾಂಧತೆ, ಜಾತೀಯತೆ ಮತ್ತು ಧಾರ್ಮಿಕ ಮೌಢ್ಯತೆಗಳಿಂದಾಗಿ ಭಾರತೀಯ ಸಮಾಜದಲ್ಲಿ ಸೃಷ್ಟಿಯಾಗಿದ್ದ ನಿಷ್ಕ್ರಿಯತೆಯನ್ನು ಹಾಗೂ ಅದಕ್ಕೆ ಕಾರಣಗಳನ್ನು ಶೋಧಿಸಲು ಕುವೆಂಪು ಅವರ ಸೃಷ್ಟಿಶೀಲತೆ ತೊಡಗಿತು ಪರಕೀಯ ಸಂಸ್ಕೃತಿಯನ್ನು ಹೇರುವ ಮೌಲ್ಯಗಳನ್ನು ತಾತ್ವಿಕವಾಗಿ ಪ್ರಶ್ನಿಸುವ ಅವರ ಎಲ್ಲಾ ರೀತಿಯಾದಂತಹ ಧೋರಣೆಗಳು ಬಹಳ ಗಮನಾರ್ಹವಾದುದ್ದಾಗಿದೆ.

ಕುವೆಂಪು ಅವರ ಈ ಬಗೆ ಧೋರಣೆಗಳು ಒಳ ಮತ್ತು ಹೊರಗಿನ ಸಂಸ್ಕೃತಿಗಳು ಹೇರುವ ಹಾಗೂ ಶೋಷಿಸುವ ಸ್ಥಿತಿಗತಿಗಳನ್ನು ಕಂಡು ಸಿಡಿದೇಳುತ್ತವೆ. ವೈಚಾರಿಕ ವೈಜ್ಞಾನಿಕ

ನಿಕಷಕ್ಕೆ ಒಂದು ಸಿದ್ಧ ಮೌಲ್ಯವ್ಯವಸ್ಥೆಯನ್ನು ಗುರಿಪಡಿಸುವ ಕ್ರಮ ಅವರ ಎಲ್ಲಾ ಕೃತಿಗಳ ಮುಖ್ಯ ಆಶಯವಾಗಿದೆ. ಇದರ ಜೊತೆಯಲ್ಲಿಯೇ ವಸಾಹತು ಸಂಸ್ಕೃತಿಯು ತಂದ ವಿಸ್ಮಯ ಹಾಗೂ ಸಮಸ್ಯೆಗಳಿಗೆ ಅವರ ಕೃತಿಗಳು ಪ್ರತಿಕ್ರಿಯಿಸುವ ಪ್ರಕ್ರಿಯೆಯೂ ಅತ್ಯಂತ ಸಂಕೀರ್ಣವಾದುದು. ಅಂದರೆ ಅವರ ಕೃತಿಗಳಲ್ಲಿ ಅಭಿವ್ಯಕ್ತಗೊಳ್ಳುವ ಸಂಕೀರ್ಣತೆಯ ವೈದಿಕ ಹಾಗೂ ವಸಾಹತುಶಾಹಿ ವ್ಯವಸ್ಥೆಗಳೆರೆಡರ ಸ್ವೀಕರಣೆ ಮತ್ತು ನಿರಾಕರಣೆಯ ನೆಲೆಗಳಲ್ಲಿ ಪ್ರಕಟವಾಗುತ್ತದೆ."[6]

ವಸಾಹತುಶಾಹಿಯಪ್ರಜ್ಞೆಯೂ ಈ ಮೊದಲೇ ಹೇಳಿರುವ ಹಾಗೆ ಭಾರತದ ಸಾಂಸ್ಕೃತಿಕ ಜೀವನದಲ್ಲಿ ಅನೇಕ ರೀತಿಯಾದಂತಹ ಗೊಂದಲಗಳನ್ನು ಉಂಟು ಮಾಡಿತ್ತು. ನಾವು ಮುಖ್ಯವಾಗಿ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಈ ಎರಡೂ ಕಾದಂಬರಿಗಳು ಕೂಡ ಮತಾಂತರದ ವಿಚಾರಕ್ಕೆ ಸಂಬಂಧಿಸಿದಂತೆ ಮರು ಪ್ರಶ್ನೆಯನ್ನು ಹಾಕುವ ಮುಖೇನ ಪ್ರಾರಂಭದ ಹಂತದಲ್ಲಿ ಸ್ವೀಕರಿಸಿಕೊಳ್ಳುವವರಂತೆ ಕಂಡು ಬಂದರೂ ಕೂಡ ಅಂತಿಮವಾಗಿ ಅನ್ಯ ಧರ್ಮವನ್ನು ಸ್ವೀಕರಿಸುವ ಬದಲಿಗೆ ನಿರಾಕರಿಸಿರುವುದನ್ನು ಗ್ರಹಿಸಬಹುದಾಗಿದೆ. ಒಂದು ಕಡೆಯಲ್ಲಿ ದೇಶೀಯ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತಹ ಚಳುವಳಿಯ ಹೋರಾಟದ ಒಂದು ವಾತಾವರಣವೂ ಎಲ್ಲಾ ಕಡೆಗೂ ಸಹ ಹಬ್ಬಿತ್ತು.

ಕಾದಂಬರಿಗಳು ಬಹಳ ಪ್ರಮುಖವಾಗಿ ಸಮಾಜದ ಹೊರಗಿನ ಮತ್ತು ಒಳಗಿನ ಎಲ್ಲಾ ಬಗೆಯ ಅಮಾನವೀಯ ಮೌಲ್ಯಗಳನ್ನು ಪ್ರಶ್ನಿಸುವ ಮುಖಾಂತರ ಅಲ್ಲಿನ ಮಾನವೀಯವಾದಂತಹ ಮೌಲ್ಯಗಳ ಶೋಧನೆಗೆ ತೊಡಗುತ್ತವೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ನಾವು ಬಹಳ ಪ್ರಮುಖವಾಗಿ ಗ್ರಹಿಸಬೇಕಾದಂತಹ ಅಂಶವೇನೆಂದರೆ ಸಂಪೂರ್ಣವಾದಂತಹ ಕೆಲಸ-ಕಾರ್ಯಚಟುವಟಿಕೆಗಳಿಗೆ ಕೇಂದ್ರ ಬಿಂದುವಾಗಿದ್ದಂತಹ ಅಂತಕ್ಕನ ಹೋಟ್ಲು ಮನೆಯು ನಿಧಾನವಾಗಿ ಅವನತಿಯನ್ನು ಹೊಂದುವ ಮುಖಾಂತರ ಅದೇ ಹೋಟ್ಲು ಮನೆ ಸ್ಕೂಲ್‌ಮನೆಯಾಗಿ ಪರಿವರ್ತನೆಗೊಂಡಂತಹ ಅಂಶವು ಎಲ್ಲರ ಗಮನವನ್ನು ಸೆಳೆಯುವಂತಹುದಾಗಿರುತ್ತದೆ. ಇಲ್ಲಿ ಬಹಳ ಪ್ರಮುಖವಾಗಿ ಗ್ರಹಿಸಬೇಕಾದಂತಹ ಅಂಶವೇನೆಂದರೆ ಅಂತಕ್ಕನ ಆ ಸ್ಕೂಲ್ ಮನೆಯು ನವ ಯುವಕರಿಗೆ ಅಥವಾ ಮುಂದಿನ ಪೀಳಿಗೆಗೆ ವಿದ್ಯಾಭ್ಯಾಸ ಪಡೆಯುವಲ್ಲಿ ಬಹಳಷ್ಟು ಪ್ರೇರಕವಾಗಿತ್ತು ಎಂಬುದನ್ನು ಕುವೆಂಪುರವರು ಚಿತ್ರಿಸಿರುತ್ತಾರೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ

ಇತರೆ ಕಾರ್ಯ ಚಟುವಟಿಕೆಗಳ ಬೀಡಾಗಿದ್ದಂತಹ ಅಂತಕ್ಕನ ಮನೆಯೇ ವಿದ್ಯಾಭ್ಯಾಸ ಕೇಂದ್ರವಾಗಿ ಮಾರ್ಪಾಟುಗೊಂಡಿರುವಂತಹ ಅಂಶವೂ ಎಲ್ಲರ ಗಮನವನ್ನು ಸೆಳೆಯುವಂತಹುದಾಗಿ ಕಾಣಿಸಿಕೊಂಡಿರುತ್ತದೆ. ಇದು ಸಂಘರ್ಷಾನಂತರದ ಫಲಿತಾಂಶದ ದ್ಯೋತಕ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮಲೆನಾಡು ಹೇಗೆ ಅಲ್ಲಿನ ಜನರ ಜೀವನಕ್ಕೆ ಆಶ್ರಯದ ತಾಣವಾಗಿ ಕಾಣಿಸಿಕೊಳ್ಳುತ್ತದೆಯೋ ಅದೇ ರೀತಿಯಲ್ಲಿ ಅಂತಕ್ಕನ ಹೋಟ್ಲು ಮನೆಯ ಅಲ್ಲಿನ ಜನರಿಗೆ ವಿಧ್ಯಾಭ್ಯಾಸದ ಕೇಂದ್ರವಾಗಿ ಮಾರ್ಪಾಟು ಹೊಂದುವ ಮೂಲಕ ಅಲ್ಲಿನವರು ನವನಾಗರೀಕತೆಯ ಕಡೆಗೆ ಮುನ್ನಡೆಯುವಂತೆ ವಸಾಹತುಶಾಹಿಯ ಪ್ರಜ್ಞೆಯೂ ಮಲೆನಾಡಿನಲ್ಲಿ ಹೇಗೆ ಒಡಮೂಡಿ ಬಂತು ಎಂಬುದನ್ನು ನಾವು ಇಲ್ಲಿ ಗ್ರಹಿಸಬಹುದಾಗಿದೆ. ಅಂತಕ್ಕನ ಸ್ಕೂಲ್ ಮನೆಯಲ್ಲಿಯೇ ವಿದ್ಯೆಯನ್ನು ಕಲಿತುಕೊಂಡು ಮೈಸೂರು, ಬೆಂಗಳೂರು ಎಂಬ ಬೇರೆ-ಬೇರೆ ನಗರಗಳಿಗೆ ಹೋಗುವ ಮೂಲಕ ಹೆಚ್ಚಿನ ವಿದ್ಯಾಭ್ಯಾಸವನ್ನು ಪಡೆದು ಕೊಳ್ಳುವ ಮುಖಾಂತರ ತಾನು ಹುಟ್ಟಿ ಬೆಳೆದಂತಹ ಮಲೆನಾಡಿಗೆ ಹಿಂದಿರುಗುವ ವಿದ್ಯಾವಂತರ ಜೀವನ ವಿಚಾರಗಳನ್ನು ನಾವು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಹಿನ್ನಲೆಯಿಂದಲೇ ನೋಡು-ನೋಡುತ್ತಾ ಹೂವಯ್ಯನು ಪುನಃ ಮಲೆನಾಡಿನ ಪ್ರದೇಶಕ್ಕೆ ಮರಳುವ ಮುಖಾಂತರ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಗ್ರಹಿಕೆಯನ್ನು ನಾವಿಲ್ಲಿ ನೋಡಬಹುದಾಗಿರುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಬಹಳ ಪ್ರಮುಖವಾಗಿ ಗ್ರಹಿಸಬಹುದಾದಂತಹ ಅಂಶವೆಂದರೇ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯೂ ಪ್ರಾರಂಭದಲ್ಲಿ ನವನಾಗರೀಕತೆಯ ಕಡೆಗೆ ವಸಾಹತುಪ್ರಜ್ಞೆಯ ಗ್ರಹಿಕೆಯನ್ನು ಮಾಡುವುದಾಗಿ ಕಂಡು ಬಂದರೆ, 'ಕಾನೂರು ಹೆಗ್ಗಡಿತಿ' ಆಧುನೀಕತೆಯ ಕಡೆಗೆ ಮುಖ ಮಾಡಿರುವುದನ್ನು ಕಾಣಬಹುದಾಗಿದೆ. ಮಲೆನಾಡಿನ ಜನತೆಗೆ ಅಪರಿಚಿತವಾಗಿದ್ದು ತದನಂತರದಲ್ಲಿ ಚಿರಪರಿಚಿತವಾದಂತಹ ವಸ್ತುಗಳಾಗಿ ನಾವು ವೈನ್-ವಿಸ್ಕಿ, ಲಾಟೀನು, ಬೈಸಿಕಲ್ಲು ಇವುಗಳನ್ನು ನೋಡಬಹುದಾಗಿರುತ್ತದೆ. ಹಾಗೆಯೇ ಆಧುನಿಕತೆಯ ಲಕ್ಷಣಗಳಾದ ಕ್ರಾಪು, ಉಡುಪು, ಇಂಗ್ಲೀಷ್ ಭಾಷೆ, ಸೇವನೆ ಮಾಡುವಂತಹ ಕಾಫಿ ಪುಡಿಗಳು ಇವೆಲ್ಲವೂ ಕಾದಂಬರಿಯ ಉದ್ದಕ್ಕೂ ಬರುವ ಅಂಶಗಳಾಗಿವೆ. ಧರ್ಮದ ವಿಚಾರಕ್ಕೆ ಸಂಬಂಧಪಟ್ಟಂತೆ ಮತಾಂತರದ ಬಗೆಗಿನ ಪ್ರತಿರೋಧವೂ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಹೆಚ್ಚಾಗಿ

ಕಂಡು ಬರುತ್ತದೆ ಆದರೆ 'ಕಾನೂರು ಹೆಗ್ಗಡಿತಿ'ಯಲ್ಲಿ ಅಷ್ಟಾಗಿ ಕಂಡು ಬರದಿದ್ದರೂ ಕೂಡ ಮತಾಂತರದ ಪ್ರಕ್ರಿಯೆಯ ಬಗೆಗೆ ವಿಡಂಬನೆ ಇರುವುದನ್ನು ಕಾಣಬಹುದಾಗಿದೆ ಕ್ರೈಸ್ತ ಧರ್ಮದ ಮತಾಂತರಕ್ಕೆ ಸಂಬಂಧ ಪಟ್ಟಂತೆ ಬಹಳಷ್ಟು ಹೆಚ್ಚಿನ ಮಹತ್ವವನ್ನು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಿಗಿಂತ ಭಿನ್ನವಾದಂತಹ ಧೋರಣೆಗಳು 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ವ್ಯಕ್ತವಾಗಿರುವುದನ್ನು ನೋಡಬಹುದಾಗಿದೆ. ಮತಾಂತರದ ಆಮಿಷಗಳಾಗಿ ಸುಧಾರಣೆಯನ್ನು ಮಾಡುವಂತಹ ನೆಪದಲ್ಲಿ ಮಲೆನಾಡನ್ನು ಪ್ರವೇಶಿಸಿದಂತಹ ಇಂಗ್ಲೀಷ್ ಶಾಲೆ, ಆಸ್ಪತ್ರೆ–ಪೋಲಿಸ್ ಠಾಣೆ, ಇನ್ನು ಮೊದಲಾದಂತಹ ಸುಧಾರಣಾವಾದಿ ನೆಲೆಗಳಾಗಿ ಪ್ರವೇಶವನ್ನು ನೀಡಿದಂತಹ ಇವುಗಳಿಗೆ ಅದರಲ್ಲಿಯೂ ಬಹಳ ಪ್ರಮುಖವಾಗಿ ಇಂಗ್ಲೀಷ್‌ಶಾಲೆ ಮತ್ತು ಆಸ್ಪತ್ರೆಗೆ ಇವುಗಳಿಂದ ಆಗುವಂತಹ ಪ್ರಯೋಜನದ ಬಗೆಗೆ ತಿಳಿಯಬಹುದಾಗಿದೆ. ಇದರ ಜೊತೆಗೆ ಮಲೆನಾಡನ್ನು ಪ್ರವೇಶಿಸಿದಂತಹ ಯಂತ್ರ, ಸಂಸ್ಕೃತಿ, ವ್ಯಕ್ತಿ–ವ್ಯಕ್ತಿಗಳ ನಡುವೆ ಅಗಾಧವಾದಂತಹ ವಿಸ್ಮಯಕ್ಕೆ ಕಾರಣವಾಗುವುದರ ಜೊತೆಗೆ ಅಲ್ಲಿನ ಜನರ ಮಾನಸಿಕವಾದ ಯಾತನೆಯನ್ನು ಪ್ರತಿಬಿಂಬಿಸುವುದನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ.

ಮಲೆನಾಡಿನ ಜನರ ಜೀವನ ಕ್ರಮವು ಮೂಲಭೂತವಾಗಿ ಪಲ್ಲಟಗೊಳ್ಳುತ್ತಿರುವುದನ್ನು ನಾವು ಕಾದಂಬರಿಗಳಲ್ಲಿ ತಿಳಿಯಬಹುದಾಗಿದೆ. ಒಂದು ಕಡೆಯಲ್ಲಿ ವ್ಯಕ್ತಿಯ ನಿರಪೇಕ್ಷವಾದಂತಹ ಧಾರ್ಮಿಕ ಸಂದರ್ಭಗಳು ಮನುಷ್ಯನ ಬದುಕನ್ನು ತಲ್ಲಣಗೊಳಿಸಿದರೆ ಮತ್ತೊಂದು ಕಡೆಯಲ್ಲಿ ನೂತನವಾದಂತಹ ವಸ್ತುಗಳಿಂದಾಗಿ ಮನುಷ್ಯನ ಮೂಲಭೂತ ಸಂವೇದನೆಗಳು, ಯಾವ ರೀತಿಯಲ್ಲಿ ಪರಿವರ್ತನೆಗೊಳ್ಳುತ್ತದೆ ಎಂಬುದನ್ನು ನಾವು ಕಾದಂಬಗಳಲ್ಲಿ ತಿಳಿಯಬಹುದಾಗಿದೆ ಅಂದರೆ ವಸಾಹತುಪ್ರಜ್ಞೆಯ ಆಗಮನ ಮತ್ತು ಅದರ ಸ್ವೀಕಾರಗಳಿಂದಾಗಿ ಹೇಗೆ ಮಲೆನಾಡಿನ ಜನರ ಜೀವನ ಕ್ರಮವೂ ಯಾವ ರೀತಿಯಾದ ಪರಿವರ್ತನೆಯನ್ನು ಕಾಣುತ್ತದೆ ಎಂಬುದನ್ನು ಗ್ರಹಿಸಬಹುದಾಗಿದೆ. ಅನಾಗರೀಕತೆಯಿಂದ ಆಧುನಿಕತೆಯ ಕಡೆಗೆ ಸಾಗಿರುವುದನ್ನು ಮತ್ತು ಅವುಗಳಿಂದಾಗಿ ಮಲೆನಾಡಿನಲ್ಲಿ ಏರ್ಪಡುವಂತಹ ಮಾರ್ಪಾಟುಗಳನ್ನು ಗುರ್ತಿಸಬಹುದು.

'ಮಲೆಗಳಲ್ಲಿ ಮದುಮಗಳು' ಇದರಲ್ಲಿ ಕುವೆಂಪುರವರು ಪಾದ್ರಿ ಜೀವರತ್ನಯ್ಯನನ್ನು ಮಲೆನಾಡಿಗೆ ಪ್ರವೇಶಿಸುವ ಮುಖಾಂತರ ಒಂದು ನೂತನವಾದಂತಹ ಬದಲಾವಣೆಯನ್ನು ತರುವಂತಹ ಶಕ್ತಿಯಾಗಿ ಚಿತ್ರಿಸಿರುತ್ತಾರೆ. ಈತನ ಮೂಲಕ ಭಾರತ ದೇಶಕ್ಕೆ ವಸಾಹತುಶಾಹಿಯು ಪ್ರವೇಶಿಸಿತು. ಕುವೆಂಪುರವರು ತಮ್ಮ ಸಂವೇದನೆಯು ಯಾವುದೇ ರೀತಿಯಾದಂತಹ ನಿರ್ದಿಷ್ಟ

ಮತ ಹಾಗೂ ಧರ್ಮಗಳಿಗೆ ಅಂದರೆ ಅವುಗಳಲ್ಲಿ ಕಂಡು ಬರುವಂತಹ ವಿಚಾರಗಳಿಗೆ ಕಟ್ಟು ಬೀಳುವಂತಹ ಸಂವೇದನೆ ಅಲ್ಲ ಎಂಬುದನ್ನು ಕಾದಂಬರಿಯ ಮೂಲಕವೇ ತಿಳಿಯಪಡಿಸಿದ್ದಾರೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಪಾದ್ರಿಯ ಮುಖಾಂತರ ತಿಳಿಯಬಹುದಾದರೆ 'ಕಾನೂರು ಹೆಗ್ಗಡಿತಿ'ಯಲ್ಲೂ ಹೂವಯ್ಯನು ಬುದ್ಧನ ಬಗೆಗೆ ತೋರುವ ಒಲವು, ಇಡೀ ಮಲೆನಾಡಿನ ಕುಟುಂಬದ ವಿಚಾರಗಳು ಮತ್ತು ಸಾಮಾಜಿಕವಾದಂತಹ ನೆಲೆ ಇವುಗಳ ಮುಖಾಮುಖಿ ನಡೆಯುವುದು ಅಂತೆಯೇ ಬುದ್ಧನ ವಿಚಾರಧಾರೆಯ ಬಗೆಗಿನ ಹೂವಯ್ಯನ ಒಲವು ಸಂಕೇತಿಸುತ್ತಿರುವುದು ಏನನ್ನೂ ಎಂಬುದನ್ನು ನಾವು ತಿಳಿಯಬೇಕಾಗುತ್ತದೆ.

'ಕಾನೂರು ಹೆಗ್ಗಡಿತಿ'ಯಲ್ಲಿ ಬಹಳ ಪ್ರಮುಖವಾಗಿ ಹೂವಯ್ಯನು ಭಗವದ್ಗೀತೆ, ವೇದ ಉಪನಿಷತ್ತುಗಳು, ಜೈನ ಪುರಾಣಗಳ ಬಸವ-ಬುದ್ಧ ಮೊದಲಾದಂತಹ ವಿಚಾರಗಳನ್ನು ಗ್ರಹಿಸುವ ಮುಖೇನ ಮಲೆನಾಡಿನಲ್ಲಿ ಅಲ್ಲಿನ ಸ್ಥಳೀಯತೆಗೆ ತಾನು ಪರಕೀಯನಾಗಿ ಇರುವಂತಹ ಪರಿಸರವನ್ನು ತನ್ನ ವಿಚಾರಗ್ರಹಿಕೆಗೆ ಸಂಬಂಧಿಸಿದಂತೆ ಬದಲಾವಣೆಗೆ ಒಳಪಡಿಸಲು ಯತ್ನಿಸುವವನಾಗಿ ಕಾಣಿಸಿಕೊಳ್ಳುತ್ತಾನೆ ಆದರೆ ಜೋಯಿಸರ ವೆಂಕಪ್ಪನವರು ಮಲೆನಾಡಿನ ಜನರ ಮೌಢ್ಯತೆಯನ್ನೇ ತನ್ನ ಬದುಕಿನ ಕ್ರಮವಾಗಿ ಅಳವಡಿಸಿಕೊಂಡಿದ್ದರು ಅದನ್ನೇ ಸಂಪೂರ್ಣವಾಗಿ ಹೂವಯ್ಯ ವಿರೋಧಿಸಿದ ಕಾರಣದಿಂದಾಗಿ ಅದೇ ಮಲೆನಾಡಿನ ಕೆಲವು ವ್ಯಕ್ತಿಗಳ ಕುತಂತ್ರಕ್ಕೆ ಒಳಗಾಗುವ ಮುಖೇನ ತಾನು ತನ್ನ ಬದುಕಿನಲ್ಲಿ ನಿರಾಶೆಗೆ ಒಳಗಾಗುತ್ತಾನೆ. ಅಂದರೆ ತಾನು ಪ್ರೀತಿಸಿದಂತಹ ಸೀತೆಯನ್ನು ಕೊನೆಗೂ ಪಡೆಯಲಾಗದೇ ಹೋದದನ್ನು ತಿಳಿಯಬಹುದಾಗಿದೆ. ಇದು ಕೇವಲ ಒಂದು ಹೆಣ್ಣು ಅಥವಾ ಹೆಂಡತಿಯ ವಿಚಾರವಲ್ಲ ಒಂದು ರೀತಿ ಇಡೀ ಜೀವನಕ್ಕೆ ಸಂಬಂಧಿಸಿದ್ದೇ ಆಗಿದೆ.



'ಮಲೆಗಳಲ್ಲಿ ಮದುಮಗಳ'ಲ್ಲಿ ಕಂಡು ಬರುವಂತಹ ಮುಕುಂದಯ್ಯನು ತಾನು ಅಲ್ಲಿಯ ಪರಿಸರಕ್ಕೆ ಅನುಗುಣವಾಗಿ ನಡೆದುಕೊಳ್ಳುವ ಮುಖಾಂತರ ತನ್ನ ಪ್ರೇಯಸಿಯಾದಂತಹ ಚಿನ್ನಮ್ಮಳನ್ನು ಅಂತಿಮವಾಗಿಯೂ ಪಡೆದುಕೊಳ್ಳುತ್ತಾನೆ ಅಂದರೆ ಇಲ್ಲೂ ಸಹ ಹಲವಾರು ರೀತಿಯ ಸಮಸ್ಯೆಗಳು ಎದುರಾದರೂ ಕೂಡ ಅವೆಲ್ಲವನ್ನು ಎದುರಿಸುವ ಮುಖೇನ ಮಲೆಗಳಲ್ಲಿ ಮದುಮಕ್ಕಳಾಗಿ ಮಿಂಚುತ್ತಾರೆ ಆದರೆ 'ಕಾನೂರು ಹೆಗ್ಗಡಿತಿ'ಯಲ್ಲಿ ಅಲ್ಲಿನ ಪರಿಸರವನ್ನು ತಾನು ಇದ್ದುದನ್ನು ವಿರೋಧಿಸಿಕೊಳ್ಳುವ ಮುಖಾಂತರ ತಾನು ಬಯಸಿದ ಹಾಗೇ ಅಲ್ಲಿಯ ಪರಿಸರವನ್ನು ಮಾರ್ಪಾಟು ಮಾಡಲು ಸಾಧ್ಯವಾಗದೇ, ಹೋದ ಕಾರಣದಿಂದಾಗಿ ಹೂವಯ್ಯ ನಿರಾಶೆಗೊಳ್ಳುತ್ತಾನೆ. ಆದರೆ ತನ್ನ ಮನೋವೃತ್ತಿಯಿಂದಾಗಿ ಆತ ಉಳಿದೆಲ್ಲ ಪಾತ್ರಗಳಿಗಿಂತ

ಭಿನ್ನವಾಗಿ ನಿಲ್ಲುವುದರ ಮುಖೇನ ಆತ ತನ್ನ ಸುಶಿಕ್ಷಿತತೆ, ಆಧ್ಯಾತ್ಮಿಕತೆ ಮತ್ತು ಕ್ರಿಯಾಶೀಲತೆಯಿಂದಾಗಿ ಮಲೆನಾಡಿನ ಸುತ್ತಲಿನವರ ಬದುಕನ್ನು ಉತ್ತಮಗೊಳಿಸಲು ಪ್ರಭಾವ ಬೀರುತ್ತಾನೆ. ಕೊನೆಗೆ ಆತನ ಸತತವಾದ ಪ್ರಯತ್ನದಿಂದಾಗಿ ಮಲೆನಾಡಿನ ಅನೇಕ ಹಳ್ಳಿಗಳು ನಾಗರೀಕತೆಯ ಕಡೆಗೆ ಹೆಜ್ಜೆ ಹಾಕುವ ಮುಖಾಂತರ ಅಲ್ಲಿನ ಕೆಲವು ವ್ಯಕ್ತಿಗಳು ತಮ್ಮ ಬದುಕನ್ನು ಅನಾಗರೀಕತೆಯಿಂದ ನಾಗರೀಕತೆಯ ಕಡೆಗೆ ಸಾಗುವುದು ಸುಸ್ಪಷ್ಟ. ಆದರೆ ಮುಕುಂದಯ್ಯನು ಹೊಸ ತಲೆಮಾರಿನ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುವ ಮುಖಾಂತರ ಅಂದಿನ ಶಿಷ್ಟಾಚಾರದ ಕಟ್ಟುಪಾಡುಗಳನ್ನು ಉಲ್ಲಂಘಿಸುವವನಾಗಿ ಕಾಣಿಸಿಕೊಳ್ಳುತ್ತಾನೆ. ಹಾಗೆಯೇ ಪುರೋಹಿತ ವರ್ಗವು ಸೃಷ್ಟಿಸಿದಂತಹ ಮೌಢ್ಯದ ವಿರುದ್ಧ ತನ್ನ ಪ್ರತಿಭಟನೆಯನ್ನು ವ್ಯಕ್ತ ಪಡಿಸುತ್ತಾನೆ. ಅಂದರೆ ತನ್ನ ಭಾವ ದೇವಯ್ಯನನ್ನು ಮತಾಂತರದ ಕಾರ್ಯದಿಂದಾಗಿ ತಪ್ಪಿಸುವಂತಹ ಹುನ್ನಾರವನ್ನು ಹೆಣೆಯುವವನಾಗಿ ಅವನ ಪಾತ್ರವನ್ನು ಕುವೆಂಪುರವರು ಚಿತ್ರಿಸಿರುತ್ತಾರೆ. ಅಂತಿಮವಾಗಿ ಗುತ್ತಿ-ತಿಮ್ಮಿ, ಐತ-ಪೀಂಚಲು, ಇದರಂತೆ ಮುಕುಂದಯ್ಯ-ಚಿನ್ನಮ್ಮನವರು ಮಲೆಗಳಲ್ಲಿ ಮದುಮಕ್ಕಳಾಗಿ ಕಾಣಿಸಿಕೊಳ್ಳುತ್ತಾರೆ ಎಂಬುದನ್ನು ಅರಿಯಬಹುದಾಗಿದೆ.

ನವನಾಗರೀಕತೆಯನ್ನು ಸ್ವೀಕರಿಸುವ ಮುಖಾಂತರ ಆಧುನೀಕರಣ ಪ್ರವೇಶ ಹೇಗಾಯಿತು ಎನ್ನುವಂತಹುದು ಕುವೆಂಪುರವರ ಎರಡೂ ಕಾದಂಬರಿಗಳ ಹಿನ್ನಲೆಯಲ್ಲಿ ಗ್ರಹಿಸಬಹುದಾಗಿದೆ. ಸಾಮಾಜಿಕವಾಗಿ ಬದಲಾವಣೆಗೆ ಒತ್ತು ಕೊಟ್ಟಿರುವುದನ್ನು ನೋಡಬಹುದು. ಕಾದಂಬರಿಯ ಉದ್ದಕ್ಕೂ ಯಜಮಾನ ಪದ್ಧತಿಯ ಆರ್ಥಿಕ ಸಂಬಂಧಗಳನ್ನು ನಾವು ನೋಡಬಹುದಾಗಿದೆ. ಆಧುನಿಕತೆಯ ಆಗಮನದಿಂದಾಗಿ ಹಳೆಯ ವ್ಯವಸ್ಥೆ ಎಂಬುದು ನಿಧಾನವಾಗಿ ಬಲಹೀನಗೊಳ್ಳುತ್ತಿರುವುದನ್ನು ನಾವು ನೋಡಬಹುದಾಗಿದೆ. ಹೊಸ ಸಂಬಂಧಗಳು ರಚನೆಗೊಳ್ಳುವ ಮೂಲಕ ಮೊದಲಿಗೆ ಹಳೆಯ ವ್ಯವಸ್ಥೆಯೂ ಮೊದಮೊದಲು ಪರಿವರ್ತನೆಗೊಳ್ಳುವುದು ಕಂಡು ಬಂದರೂ ಕೂಡ ಹಳೆಯ ವ್ಯವಸ್ಥೆಯೂ ಸಹ ತನ್ನ ಹಿಡಿತವನ್ನು ಬಲಪಡಿಸಿಕೊಳ್ಳಲು ಯತ್ನಿಸುತ್ತದೆ ಎಂಬುದನ್ನು ನಾವು ತಿಳಿಯಬಹುದಾಗಿದೆ. ಯಾವ ರೀತಿಯಲ್ಲಿ ಮೇಲುವರ್ಗದವರು ಕೀಳು ಜಾತಿಯವರ ಮೇಲೆ ಅಧಿಕಾರವನ್ನು ಹೇರುತ್ತಿದ್ದರು ಎಂಬುದನ್ನು ಸಹ ಕಾದಂಬರಿಯು ನಿರೂಪಿಸುತ್ತದೆ. ಉದಾಹರಣೆಗೆ ಹೊನ್ನಾಳಿಯಲ್ಲಿ ಮುಖ್ಯವಾಗಿ ಬ್ರಾಹ್ಮಣರು, ಹೆಗ್ಗಡೆಗಳು, ಗೌಡರು ಹಾಗೂ ಮಧ್ಯವರ್ತಿಗಳಾದಂತಹ ವಸೂಲಿಸಾಬರು, ಕಿಲಿಸ್ತರ ಜಾತಿಯಂತವರು ಹಿಂಸೆಯನ್ನು ಆಶ್ರಯಿಸುತ್ತಾರೆ. ಆದರೆ ಉಳಿದಂತಹ ಕೆಲವು ಪಾತ್ರಗಳು ಅವುಗಳಿಗೆ ವಿರುದ್ಧವಾಗಿ ಕಂಡು

ಬರುತ್ತವೆ. ಒಟ್ಟಾರೆಯಾಗಿ ಕುವೆಂಪುರವರು ಭಾರತೀಯರ ಸಂಸ್ಕೃತಿಯ ಒಳಸತ್ವವನ್ನು ಆಧುನಿಕವಾದಂತಹ ವಿದ್ಯಾವಂತಿಕೆಯನ್ನು ಮತ್ತು ಮಾನವೀಯತೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಭಾರತದ ಆ ಕಾಲದ ಚಿಂತನಾ ಕೇಂದ್ರಗಳಾದಂತಹ ಗಾಂಧೀವಾದವನ್ನು ಮಾನವತಾವಾದವನ್ನು ಸಮಾಜವಾದವನ್ನು, ವರ್ಗ-ವರ್ಣ-ಜಾತಿಗಳಿಗೆ ಸಂಬಂಧ ಪಟ್ಟಂತಹ ನೆಲೆಗಳನ್ನು ಒಂದು ನಿರ್ದಿಷ್ಟ ಸಂಸ್ಕೃತಿಯ ಸಂದರ್ಭದ ಪ್ರಕ್ರಿಯೆಗೆ ಸಂಬಂಧಿಸಿದಂತಹ ಭಾಗಗಳನ್ನು ನಾವು ಗುರುತಿಸುವ ಮೂಲಕವಾಗಿ ಪ್ರಜ್ಞಾಪೂರ್ವಕವಾದಂತಹ ದೃಷ್ಟಿ ಕಾದಂಬರಿಗಳಲ್ಲಿ ಒಡಮೂಡಿರುವುದನ್ನು ಗಮನಿಸಬಹುದಾಗಿದೆ.

'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿ ಇವೆರಡರಲ್ಲಿಯೂ ಮಲೆನಾಡಿನ ಹಳ್ಳಿಗಳಲ್ಲಿನ ಜೀವನ ಕ್ರಮಗಳನ್ನು ಮತ್ತು ಪ್ರಾದೇಶಿಕತೆಯ ಅಂಶಗಳನ್ನು ಕುವೆಂಪುರವರು ಪ್ರಬಲವಾಗಿ ಚಿತ್ರಿಸಿರುತ್ತಾರೆ. ಹುಲಿಕಲ್ಲು ಶಿಖರ, ಮೇಗರವಳ್ಳಿಯ ಹೆದ್ದಾರಿ, ಕಲ್ಲೂರಿನ ಹೊಳೆ, ದೇವಸ್ಥಾನಗಳು ಕೋಣೂರು, ಹಳೆಮನೆ ಸಿಂಭಾವಿ, ಹೂವಳ್ಳಿ ಈ ಸ್ಥಳಗಳಲ್ಲಿ ಅಡಕೆ-ತೋಟಗಳು-ಮುಂತಾದ ಪ್ರಾದೇಶಿಕ ವಿವರಗಳನ್ನು ಈ ಕಾದಂಬರಿಯಡಿಯಲ್ಲಿ ವ್ಯಕ್ತಿಗಳಿಗೆ, ಘಟನೆಗಳಿಗೆ ನಿರ್ದಿಷ್ಟವಾದಂತಹ ಹಿನ್ನಲೆಗಳನ್ನು ಮತ್ತು ಅನಿವಾರ್ಯತೆಗಳನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ.

ವಸಾಹತುಶಾಹಿ ಆಳ್ವಿಕೆಯ ಫಲವಾಗಿ ಮೂಡಿ ಬಂದಂತಹ ಆಧುನಿಕ ಇಂಗ್ಲೀಷ್ ಶಿಕ್ಷಣವು ವಸಾಹತುಶಾಹಿಯ ಆಳ್ವಿಕೆಯನ್ನು ಸಂಪೂರ್ಣವಾಗಿ, ವಿರೋಧಿಸುವ ರಾಜಕೀಯ ಪ್ರಜ್ಞೆಯನ್ನು ಉಂಟುಮಾಡುವಂತಹುದಾಗಿ ಆಧುನೀಕರಣದ ಪ್ರಕ್ರಿಯೆಯಲ್ಲಿ ಮುನ್ನಡೆಯನ್ನು ಸಾಗಿಸಿರುವುದನ್ನು ಗ್ರಹಿಸಬಹುದಾಗಿದೆ. ಒಟ್ಟಾರೆಯಾಗಿ ಆಧುನಿಕ ಶಿಕ್ಷಣದ ಮುಖಾಂತರ ದೊರೆತಂತಹ ಸ್ವಯಂ ಪ್ರಜ್ಞೆ ಅಥವಾ ಅರಿವು ಆಗಿರಬಹುದು ಅಥವಾ ಆತ್ಮ ವಿಮರ್ಶೆಗೆ ಸಂಬಂಧಿಸಿದಂತಹ ಹಲವಾರು ರೀತಿಯಾದಂತಹ ಪ್ರಜ್ಞೆಗೆ ಸಂಬಂಧಿಸಿದಂತಹ ಅಂಶಗಳನ್ನು ಬಹಳಷ್ಟು ಸೂಕ್ಷ್ಮವಾಗಿ ತಿಳಿಯಪಡಿಸಿರುತ್ತಾರೆ. ಆಧುನಿಕತೆಗೆ ಸಂಬಂಧಿಸಿದಂತೆ ಪ್ರಾರಂಭದ ಹಂತದಲ್ಲಿ ಇಂಗ್ಲೀಷ್ ವಿದ್ಯಾಭ್ಯಾಸದಲ್ಲಿ ತೊಡಗುವುದೇ ಒಂದು ಪ್ರಮುಖವಾದಂತಹ ಪ್ರಶ್ನೆಯಾಗಿ ಕಂಡು ಬಂದರೆ ಮುಂದೆ ಕ್ರಮೇಣವಾಗಿ ಅದು ಒಂದು ಮೌಲ್ಯವಾಗಿ ಕಂಡುಬರುತ್ತದೆ. ಬಹಳ ಪ್ರಮುಖವಾಗಿ ನಾವು ಕಾದಂಬರಿಗಳಲ್ಲಿ ಹೇಗೆ ಆಧುನಿಕತೆಯ ಪ್ರಭಾವು ಆಯಾಯ ಪರಿಸರದ ಮೇಲೆ ಬೀಳುತ್ತದೆ ಮತ್ತು ಅದರಿಂದಾಗಿ ಅಲ್ಲಿನ ಪ್ರಾದೇಶಿಕತೆಯ

ಬದಲಾವಣೆಗಳನ್ನು ಕೂಲಂಕುಷವಾಗಿ ನಾವಿಲ್ಲಿ ಗ್ರಹಿಸಿದಾಗ ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಮತೀಯ ನೆಲೆಗಳಲ್ಲಿ ಹಲವಾರು ಬದಲಾವಣೆಗಳನ್ನು ಕುವೆಂಪುರವರು ತಿಳಿಯಪಡಿಸಿರುತ್ತಾರೆ.

'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಇವೆರಡೂ ಕಾದಂಬರಿಗಳಲ್ಲಿ ವಸಾಹತುಶಾಹಿಗೆ ಸಂಬಂಧಿಸಿದಂತೆ ಮತ್ತು ಸ್ಥಳೀಯತೆಗೆ ಸಂಬಂಧಿಸಿದಂತೆ ಪ್ರಮುಖವಾಗಿ ನಾವು ಗ್ರಹಿಸಬಹುದಾದಂತಹ ಅಂಶವು ಒಟ್ಟಾರೆಯಾಗಿ ಅಲ್ಲಿನ ಮಲೆನಾಡಿನಲ್ಲಿ ಗ್ರಾಮೀಣ ಸಮಾಜದ ಬದುಕಿನ ಕ್ರಮವೂ ಬದಲಾವಣೆಗೊಳ್ಳುವುದರಲ್ಲೇ ಅಡಗಿದೆ. ಈ ಕೃತಿಗಳು ನಮ್ಮ ಸಮಾಜ ವ್ಯವಸ್ಥೆಯ ಊಳಿಗಮಾನ್ಯ ಸಂದರ್ಭಗಳನ್ನು ಮತ್ತು ಕೆಳವರ್ಗ ಸಂಬಂಧಗಳಿಗೆ ಸಂಬಂಧಿಸಿದಂತೆ ಹಲವು ಪ್ರಕ್ರಿಯೆಗಳನ್ನು ಮತ್ತು ದಟ್ಟವಾದ ವಿವರಣೆ ನೀಡಿರುವುದನ್ನು ಈ ದೃಷ್ಟಿಯಿಂದ ನೋಡಬಹುದಾಗಿದೆ. ಸಂಸ್ಕೃತಿಯಲ್ಲಿ ಒಳಗೊಂಡಿರುವಂತಹ ನೆನಪುಗಳನ್ನು ಅಂದರೆ ಹಳೆಯ ವಿಚಾರಗಳಾಗಿ ಇರಬಹುದು ಅಥವಾ ಹಳೆಯ ಪದ್ಧತಿಗಳೇ ಆಗಿರಬಹುದಾಗಿದೆ. ಅವುಗಳನ್ನು ಸಂಪೂರ್ಣವಾಗಿ ದಮನಗೊಳಿಸುವ ಮುಖಾಂತರವಾಗಿ ಅದೇ ಸ್ಥಾನದಲ್ಲಿ ಹೊಸದಾದಂತಹ ಸಾಂಸ್ಕೃತಿಕ ರಚನೆಗಳನ್ನು ಸೃಷ್ಟಿಸುವಂತಹುದೇ ವಸಾಹತುಶಾಹಿಯ ಧೋರಣೆಯ ಮುಖ್ಯವಾದಂತಹ ಉದ್ದೇಶವಾಗಿರುತ್ತದೆ ಎಂಬುದನ್ನು ನಾವಿಲ್ಲಿ ಕೂಲಂಕುಷವಾಗಿ ಅಧ್ಯಯನ ಮುಖೇನ ಅರಿಯಬಹುದಾಗಿದೆ.

ಕಾದಂಬರಿಗಳು ಸಂಪೂರ್ಣವಾಗಿ ಮಲೆನಾಡಿನ ಪರಿಸರಕ್ಕೆ ಸಂಬಂಧಿಸಿದಂತೆ ಅಲ್ಲಿನ ಆಚಾರ-ವಿಚಾರಗಳಿಗೆ ಸಂಬಂಧಿಸಿದಂತೆ ಹಾಗೆಯೇ ಮೌಢ್ಯಗಳಿಗೆ ಸಂಬಂಧಿಸಿದಂತೆ ಪೋಷಕ ಶಕ್ತಿಯಾದಂತಹ ಪುರೋಹಿತಶಾಹಿಯ ಬಗ್ಗೆ ಸಂಪೂರ್ಣವಾದಂತಹ ಪ್ರತಿರೋಧಗಳನ್ನು ಒಡ್ಡುವುದನ್ನು ಕಾಣಬಹುದಾಗಿದೆ. ಪುರೋಹಿತಶಾಹಿಯ ವ್ಯವಸ್ಥೆಯ ಅಮಾನವೀಯವಾದಂತಹ, ಮೌಲ್ಯಗಳನ್ನು ಅದರ ಪ್ರಭಾವಗಳನ್ನು ಮತ್ತು ದುಷ್ಪರಿಣಾಮಗಳನ್ನು ವಿಶ್ಲೇಷಣೆಗೆ ಒಳಪಡಿಸುವ ಮೂಲಕ ನೂತನವಾದಂತಹ ವಿಚಾರಗಳ ಗ್ರಹಿಕೆಯನ್ನು ತಿಳಿಯಲು ಇಚ್ಛಿಸುತ್ತಾರೆ. ಒಟ್ಟಾರೆಯಾಗಿ ಕುವೆಂಪುರವರು ತಮ್ಮ ಸಂವೇದನೆಯ ಮುಖಾಂತರವಾಗಿ, ಪ್ರಜ್ಞಾ ಪೂರ್ವಕವಾಗಿ ಇದನ್ನೆಲ್ಲ ಚಿಂತಿಸಿರುವುದನ್ನು ಅರಿತುಕೊಳ್ಳಬಹುದಾಗಿದೆ. ಭಿನ್ನವಾದ ಚಿಂತನೆಯೊಂದಿಗೆ ಹೊಸದಾದಂತಹ ಶೋಧನೆಗಳಾಗಿ ಕುವೆಂಪುರವರ ಸಂವೇದನೆಯು ನಿರಂತರವಾಗಿ ತೊಡಗಿರುವುದನ್ನು ಈ ಮೂಲಕ ತಿಳಿಯಬಹುದಾಗಿದೆ.

ವಸಾಹತುಶಾಹಿ ಅನುಭವದಿಂದ ಬಿಡುಗಡೆಯನ್ನು ಪಡೆಯುವಂತಹ ಕಾರಣಕ್ಕಾಗಿ ವಸಾಹತು ಸಂಸ್ಕೃತಿಗಳು ಸ್ಥಳೀಯತೆಯ ಕೆಲವೊಂದು ವಿಚಾರಗಳನ್ನು ಸಮರ್ಥಿಸುತ್ತವೆ ಎಂಬುದನ್ನೂ ಸಹ ನಾವಿಲ್ಲಿ ಗುರ್ತಿಸಿಕೊಳ್ಳಬೇಕಾಗುತ್ತದೆ. ಸ್ಥಳೀಯ ಧಾರ್ಮಿಕ ನಂಬಿಕೆಗಳಿಗೆ ವಸಾಹತುಶಾಹಿಯು ತನ್ನದೇ ಆದಂತಹ ನವೀನ ವಿಚಾರಗಳನ್ನು ತಂದು ಒಡ್ಡಲು ಪ್ರಯತ್ನಿಸುತ್ತದೆ. ಆದರೆ ಸ್ಥಳೀಯವಾದ ಧಾರ್ಮಿಕ ನಂಬಿಕೆಗಳನ್ನು ಮತ್ತು ಅವುಗಳ ಹಿಂದೆ ಇರುವಂತಹ ಅಮಾನವೀಯವಾದಂತಹ ನೆಲೆಗಳನ್ನು, ವಸಾಹತು ಸಂಸ್ಕೃತಿಯು ತಂದಂತಹ ಕ್ರೈಸ್ತ ಧರ್ಮದ ಪ್ರಚಾರದ ಹಿನ್ನಲೆಯಲ್ಲಿ ಪ್ರತಿಯೊಂದು ಪ್ರಶ್ನೆಗಳನ್ನು ಕೇಳುವ ಮುಖಾಂತರ ಅದನ್ನು ಒಪ್ಪುವ ಅಥವಾ ಬಿಡುವ ನಿರ್ಧಾರವನ್ನು ಸ್ಥಳೀಯರು ಕೈಗೊಳ್ಳುವ ರೀತಿಯಲ್ಲಿ ಕುವೆಂಪುರವರು ವಿಚಾರಗಳನ್ನು ಮಂಡಿಸಿರುತ್ತಾರೆ. 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ'ಯಲ್ಲಿ ಕಂಡುಬರುವ ಮಂಜಭಟ್ಟ ಮತ್ತು ವೆಂಕಪ್ಪ ಜೋಯಿಸರ ಬದುಕಿನ ಧೋರಣೆಗಳಲ್ಲಿ ಕಂಡುಬರುವ ಒಂದು ರೀತಿಯ ವಸಾಹತುಶಾಹಿಯ ವಿಚಾರಗಳನ್ನು ಕುವೆಂಪುರವರ ಸಂವೇದನೆಯು ಬಹಳ ತೀವ್ರವಾಗಿ ವಿರೋಧಿಸುವುದನ್ನು ನಾವು ಮನಗಾಣಬಹುದಾಗಿದೆ.

ಮಲೆನಾಡಿನಲ್ಲಿ ಇರುವಂತಹ ಜನರು ತಮ್ಮ ಬದುಕಿನ ಕ್ರಮದಲ್ಲಿ ಅಲ್ಲೇ ಇರುವಂತಹ ಅಥವಾ ಸ್ಥಳೀಯ ಸಂಗತಿಗಳನ್ನು ಪರಂಪರೆಗಳನ್ನು ತಮ್ಮದನ್ನಾಗಿಯೇ ಒಗ್ಗಿಸಿಕೊಂಡಂತಹ ಅವರು ಮಲೆನಾಡಿನವರ ಬದುಕನ್ನು ಮತ್ತು ವಸಾಹತುಶಾಹಿಯ ವಿಚಾರಗಳನ್ನು ಕುವೆಂಪುರವರು ಮುಖಾಮುಖಿ ಮಾಡುತ್ತಾರೆ. ಆದರೆ ಎಷ್ಟೇ ವಿಧವಾದಂತಹ ರೀತಿಯಲ್ಲಿ ಸ್ಥಳೀಯರನ್ನು ಆಕರ್ಷಿಸಿದರೂ ಸಹ ತತ್ಕ್ಷಣ ಅವರು ತಮ್ಮ ಧಿಡೀರನೆ ಬದಲಾವಣೆಗಳನ್ನು ಮಾಡಿಕೊಳ್ಳುವಂತಹ ವಿಚಾರವನ್ನು ನಾವು ಕಾಣಲು ಸಾಧ್ಯವಾಗುವುದಿಲ್ಲ ಆದರೆ ನಿಧಾನವಾಗಿ ವಸಾಹತುಶಾಹಿಪ್ರಜ್ಞೆಗೆ ತಮ್ಮನ್ನು ತಾವು ಒಗ್ಗಿಸಿಕೊಳ್ಳುವುದನ್ನು ಗಮನಿಸಬಹುದಾಗಿದೆ.

ಮಲೆನಾಡಿನಲ್ಲಿ ಮುಖ್ಯವಾಗಿ ಪ್ರತಿಯೊಂದು ವಿಚಾರಗಳಿಗೂ ಕೂಡ ಹಿಂದಿನಕಾಲದಿಂದ ಬೆಳೆದ ಆಚಾರ-ವಿಚಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ನಾವು ಗಮನಿಸಬಹುದಾಗಿದೆ. ಅನಾರೋಗ್ಯದಿಂದ ನರಳುವಂತಹ ಸಂದರ್ಭದಲ್ಲಿ ಕೂಡಲೆ ಪರಿಹಾರವಾಗಿ ಮಲೆನಾಡಿನ ಪದ್ಧತಿಗಳಂತೆ ದೇವರನ್ನು ಕೇಳುವಂತಹುದು, ಗಣಬರಿಸುವಂತಹುದು, ಕಣ್ಣಾಪಂಡಿತರಂತವರು ಅಥವಾ ವೆಂಕಪ್ಪ ಜೋಯಿಸರಿಂದ

ಗಿಡಮೂಲಿಕೆಗಳ ಔಷಧಿಯನ್ನು ಕೊಡಿಸುವುದು ಆಗಿರಬಹುದು, ದೇವರಿಗೆ ಹಣ್ಣು ಕಾಯಿ ಕೊಡುವುದು ಆಗಿರಬಹುದು ಹರಕೆ ಹೊರುವುದು ಆಗಿರಬಹುದು, ದೆವ್ವಗಳಿಗೆ ಕೋಳಿ ಅಥವಾ ಕುರಿಗಳನ್ನು ಬಲಿಕೊಡುವುದು, ಜ್ಯೋತಿಷ್ಯ ಹೇಳುವುದು, ಜಾತಕ ಬರೆಯುವುದು, ಮಂತ್ರದಿಂದ ದೆವ್ವ ಭೂತವನ್ನು ಬಿಡಿಸುವುದು ಈ ರೀತಿಯಾದ ವಿಚಾರಗಳಿಂದ ಅಲ್ಲಿರುವಂತಹ ಕಣ್ಣಾ ಪಂಡಿತರಾಗಿರಬಹುದು ಅಥವಾ ವೆಂಕಪ್ಪ ಜೋಯಿಸರಾಗಿರಬಹುದು. ಮಲೆನಾಡಿನ ಜನರ ಮೌಢ್ಯತೆಯನ್ನೇ ತಮ್ಮ ಬದುಕಿನ ಬಂಡವಾಳವಾಗಿ, ಮಾಡಿಕೊಂಡಿರುತ್ತಾರೆ ಎಂಬುದನ್ನು ಕುವೆಂಪುರವರು ಪ್ರಚುರ ಪಡಿಸುತ್ತಾರೆ. ಒಟ್ಟಾರೆಯಾಗಿ ಅವೈಚಾರಿಕ ಮತ್ತು ಅವೈಜ್ಞಾನಿಕವಾದಂತಹ ಕ್ರಿಯಾಚಾರಗಳನ್ನು ಕಣ್ಣಿದ್ದು ಕುರುಡರ ಹಾಗೆ ಸ್ವೀಕರಿಸುವುದರಿಂದಾಗಿ ಆಗುವಂತಹ ಅನಾಹುತಗಳನ್ನು, ಪರಿಣಾಮಗಳನ್ನು ಕೃತಿ ಸ್ಫುಟಗೊಳಿಸುತ್ತದೆ.

ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಕಂಡು ಬರುವ ಹೂವಯ್ಯ ಮತ್ತು ತುಂಗಾತೀರದ ಅಗ್ರಹಾರದ ಜೋಯಿಸರಾದ ವೆಂಕಪ್ಪ ಜೋಯಿಸರ ನಡುವೆ ನಡೆದಂತಹ ಮುಖ್ಯ ಸಂಘರ್ಷದ ಅಂಶಗಳನ್ನು ನಾವಿಲ್ಲಿ ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ.

"ಜೋಯಿಸರಿಗೆ ಜಗಲಿಯ ಮೇಲೆ ಮಲಗಿದ್ದ ಹೂವಯ್ಯನನ್ನು ನೋಡಿದ ಕೂಡಲೆ ಒಂದು ವಿಧವಾದ ಜಿಗುಪ್ಸೆಯಾಯಿತು. ಏಕೆಂದರೆ ಅವನು ತಮ್ಮ ವ್ಯಾಪಾರಕ್ಕೆ ಮೂಲಧನದಂತಿದ್ದ ಹಳ್ಳಿಗರ ಮೌಢ್ಯವನ್ನು ನಿವಾರಿಸಲು ಮಾಡುತ್ತಿದ್ದ ಪ್ರಯತ್ನವು ಜೋಯಿಸರ ಭಾಗಕ್ಕೆ ಅಸಹನೀಯವಾಗಿತ್ತು. ಅದೂ ಅಲ್ಲದೆ ಬ್ರಾಹ್ಮಣರಾದ ತಮಗಿಂತಲೂ ಶೂದ್ರನಾದ ಅವನಿಗೆ ಉಪನಿಷತ್ತು ಭಗವದ್ಗೀತೆ ಮೊದಲಾದವುಗಳ ಪರಿಚಯವೂ ಜ್ಞಾನವೂ ಹೆಚ್ಚಾಗಿದೆ ಎಂಬುದು.. ಹೂವಯ್ಯನ ಸ್ಥಿತಿಯನ್ನರಿತು ಧೈರ್ಯಗೊಂಡ ಜೋಯಿಸರು ಬೆನ್ನು ನೋವು ಹೋಗುವಂತೆ ಮಂತ್ರ ಮಾಡುವುದಾಗಿಯೂ, ತಾಯಿತಿ ಕಟ್ಟುವುದಾಗಿಯೂ ಪೂಜೆ ಮಾಡಿಸುವುದಾಗಿಯೂ, ಗ್ರಹಗತಿಯನ್ನು ಸರಿಮಾಡುವುದಾಗಿಯೂ ಶಾಮಯ್ಯಗೌಡರೊಡನೆ ಹೇಳಿದರು. ಗೌಡರು ಮರುಮಾತಾಡದೆ ಸಮ್ಮತಿಸಿ ಹೂವಯ್ಯನಿಗೆ ಜೋಯಿಸರ ಅನುಗ್ರಹದ ವಿಚಾರವಾಗಿ ಹೇಳಿದರು. ಹೂವಯ್ಯ ನಕ್ಕು ಹಾಸ್ಯ ಮಾಡಿಬಿಟ್ಟನು. ಜೋಯಿಸರಿಗೂ ಅವನಿಗೂ ಬಿಸಿ-ಬಿಸಿಯಾಗಿ ನಾಲ್ಕು ಮಾತಾಯಿತು. ಜೋಯಿಸರಿಗೆ ಮುಖಭಂಗವಾಯಿತು. ಜೋಯಿಸರು ಸಿಟ್ಟಾಗಿ "ಹೂವಯ್ಯ, ನಿನಗೆ ಇದು ಒಳ್ಳೆಯದಲ್ಲ ಹಿಂದಿನಿಂದ ನಡೆದು ಬಂದ ಆಚಾರ, ದೇವರು, ವೇದ, ಶಾಸ್ತ್ರಗಳನ್ನೆಲ್ಲ ಅಲ್ಲಗೆಳೆಯುವ ನಿನಗೆ ಕೇಡು ತಪ್ಪಿದ್ದಲ್ಲ" ಎಂದರು.

ಹೂವಯ್ಯನೂ ನೀವು ತಿಳಿದವರೆಂದುಕೊಂಡು ಹಳ್ಳಿಯವರಿಗೆ ಮೌಢ್ಯವನ್ನು ಉಪದೇಶ ಮಾಡಿ, ನಿಮಿತ್ತ ಹೇಳುವುದು, ವಿಭೂತಿ ಕೊಡುವುದು, ಸತ್ಯನಾರಾಯಣ ವ್ರತ ಮಾಡಿಸುವುದು, ದೆವ್ವ ಪಿಶಾಚಿಗಳಿಗೆ ಬಲಿಕೊಡುವುದು, ಇದರಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದೀರಿ. ಟ್ರಂಕು ತಗಲಿ ಬೆನ್ನು ನೋವಾಗಿದ್ದು ಔಷಧಿ ಮಾಡಿ ಎಂದು ಹೇಳುವ ಬದಲು ಬೂದಿ ಕುಂಕುಮ ಹಚ್ಚಿ, ಮಂತ್ರ ಹಾಕಿಸಿ ಎಂದು ಹೇಳುತ್ತಿದ್ದೀರಲ್ಲಾ! ಇದು ಯಾವ ತತ್ವಶಾಸ್ತ್ರದಲ್ಲಿ ಹೇಳಿದೆ? ಹಾಗೆ ಹೇಳಿರುವ ಗ್ರಂಥಗಳಿದ್ದರೆ ಅವು ಮನ್ನಣೆಗೆ ಯೋಗ್ಯವಾದುವೆ? ನಿಮ್ಮ ಬೋಧನೆಯಿಂದ ಎಷ್ಟು ಜನರು ರೋಗಕ್ಕೆ ಸರಿಯಾಗಿ ಮದ್ದು ಮಾಡದೆ ಬರಿಯ ಬೂದಿ ವಿಭೂತಿಗಳನ್ನೇ ಹಚ್ಚಿಕೊಂದು ಪ್ರಾಣ ತೆಗೆದುಕೊಳ್ಳುತ್ತಿದ್ದಾರೆ." ....

"ಏನಯ್ಯ, ನಿನ್ನ ತಂದೆ ಎಷ್ಟು ಗೌರವದಿಂದ ನಡೆದುಕೊಳ್ಳುತ್ತಿದ್ದನು? ಅವನಿಗೆ ದೇವರಲ್ಲಿ ಎಷ್ಟು ಭಯ, ಭಕ್ತಿ! ನೀನು ಚಿಕ್ಕವನಾಗಿದ್ದಾಗ ನಾನೇ ಎಷ್ಟು ಸಾರಿ ಚೀಟಿ ವಿಭೂತಿ ಕೊಟ್ಟಿದ್ದೇನೆ!...." ಎಂದು ಜೋಯಿಸರು ಹಳೆಯ ಕಥೆಗಳನ್ನು ಹೇಳಿದರು.

"ಜೋಯಿಸರೇ, ದಯವಿಟ್ಟು ಕ್ಷಮಿಸಿ, ನಾನು ಮಾತಾಡಿದ್ದು ನಿಮ್ಮ ಮೇಲೆ ಅಗೌರವದಿಂದಲ್ಲ. ನಿಮ್ಮ ತತ್ವಗಳಿಂದ ಎಷ್ಟು ಹಾನಿಯಾಗುತ್ತದೆ ಎಂದು ಹೇಳಿದನಷ್ಟೆ! ನಿಮ್ಮ ಮನಸ್ಸಿನಲ್ಲಿ ಕೃತ್ರಿಮತೆ ಇಲ್ಲದ.. ಮಾತ್ರಕ್ಕೆ ನೀವು ಹೇಳುವುದೆಲ್ಲ ಸತ್ಯವಾಗಲಾರದು..... ನಮ್ಮ ತಂದೆ ಶ್ಲೇಷ ಜ್ವರದಿಂದ ನರುಳುತ್ತಿದ್ದಾಗ ನಿಮ್ಮ ಪೂಜೆ, ಮಂತ್ರ, ತಂತ್ರಗಳಿಗೋಸ್ಕರವಾಗಿಯಲ್ಲವೇ ಅವರು ಅಂಗಳಕ್ಕಿಳಿದು ಬಂದು ತುಲಸೀ ಪೀಠದ ಮುಂದೆ ಕುಳಿತು. ಕಣ್ಣೀರು ತಂಗಾಳಿಗಳ ಸೋಂಕಾಗಿ, ರೋಗ ಮತ್ತು ವಿಷಮವಾಗಿ, ಕಡೆಗೆ ತೀರಿಕೊಂಡದ್ದು! ನೀವೇನೋ ಸದುದ್ದೇಶದಿಂದಲೇ ಆ ಕೆಲಸ ಮಾಡಿದಿರಿ.... ಆದರೆ ಸದುದ್ದೇಶ ಅಜ್ಞಾನವನ್ನು ಸುಜ್ಞಾನವನ್ನಾಗಿ ಮಾಡಲಾರದು. ....."[7]

ಮಲೆನಾಡಿನಲ್ಲಿ ಮೌಢ್ಯತೆಗೆ ಸಂಬಂಧಿಸಿದಂತೆ ತನ್ನ ಹೊಟ್ಟೆಯನ್ನು ಹೊರೆದುಕೊಳ್ಳುತ್ತಿದ್ದ ಅಂದರೆ ತನ್ನ ಜೀವನವನ್ನು ಸಾಗಿಸುತ್ತಿದ್ದಂತಹ ಜೋಯಿಸರನ್ನು ಕುರಿತಾಗಿ ಎಲ್ಲಾ ರೀತಿಯಾದಂತಹ ಪ್ರಶ್ನೆಗಳನ್ನು ಹೂವಯ್ಯ ಕೇಳುತ್ತಿದ್ದನು. ಇದರಿಂದಾಗಿ ಹೂವಯ್ಯನ ಆಧುನಿಕವಾದಂತಹ ವಿಚಾರಧಾರೆಗಳಿಂದಾಗಿ, ಅಡ್ಡಿಮಾಡುತ್ತಿದ್ದಂತಹ ಅಂಶಗಳಿಂದ ವೆಂಕಪ್ಪಜೋಯಿಸರು ಸ್ವಲ್ಪ ಬೇಸರಗೊಂಡವರಂತೆ ಕಾಣುತ್ತಿದ್ದರು. ಹೂವಯ್ಯನು

ವಸಾಹತುಶಾಹಿಯಪ್ರಜ್ಞೆಯ ಮೂಲಕವೇ ಭಗವದ್ಗೀತೆ ಉಪನಿಷತ್ತುಗಳನ್ನು ಅರಿತಿದ್ದಂತಹ ಕಾರಣದಿಂದಾಗಿ ಮೂಲಭೂತ ಮಾನವೀಯ ನೆಲೆಗಳನ್ನು ಜನ ಸಾಮಾನ್ಯರಿಗೆ ತಿಳಿಯ ಪಡಿಸುವ ಮುಖಾಂತರ ಪುರೋಹಿತಶಾಹಿಯ ಕುತಂತ್ರಗಳನ್ನು ಬಯಲಿಗೆಳೆಯುವಂತಹ ಪ್ರಯತ್ನವನ್ನು ಮಾಡುತ್ತಿರುವುದನ್ನು ವೆಂಕಪ್ಪ ಜೋಯಿಸರು ಸಹಜವಾಗಿಯೇ ವಿರೋಧಿಸುತ್ತಾರೆ. ಒಮ್ಮೆ ಶಿವಮೊಗ್ಗದಿಂದ ಕಾನೂರಿಗೆ ಎತ್ತಿನ ಗಾಡಿಯ ಮೂಲಕ ಹೊರಟು ಬರುವಂತಹ ಸಂದರ್ಭದಲ್ಲಿ ಸ್ವಲ್ಪ ಅನಾಹುತಕ್ಕೆ ಗಾಡಿಯು ಒಳಗಾಗಿ ಅಪಘಾತವು ಸಂಭವಿಸಿತು. ಅಲ್ಲಿ ಹೂವಯ್ಯನಿಗೆ ಟ್ರಂಕು ತಗುಲಿ ಬೆನ್ನು ನೋವಾದ ಕಾರಣಕ್ಕಾಗಿ ಮಂತ್ರ ತಂತ್ರಗಳ ಮುಖಾಂತರ ವಾಸಿ ಮಾಡಲು ಪ್ರಯತ್ನಿಸಿದಂತೆ ವೆಂಕಪ್ಪನವರು ತಮ್ಮ ವೈದಿಕ ವರ್ಗದ ಚಾಣಾಕ್ಷತೆಯನ್ನು ತೋರ್ಪಡಿಸಲು ಮುಂದಾಗುತ್ತಾರೆ. ಆದರೆ ಎಲ್ಲವನ್ನು ಹೂವಯ್ಯನು ಹಲವಾರು ರೀತಿಯಾದಂತಹ ವೈಜ್ಞಾನಿಕ ಮತ್ತು ವೈಚಾರಿಕ ಉದಾಹರಣೆಗಳ ಮುಖಾಂತರ ಪ್ರಶ್ನಿಸುತ್ತಾನೆ. ಬೆನ್ನು ನೋವಿನಿಂದ ನರಳುತ್ತಿದ್ದ ಹೂವಯ್ಯನನ್ನು ಆ ನೋವಿನಿಂದಾಗಿ ಮುಕ್ತಗೊಳಿಸುವ ಕಾರಣಕ್ಕಾಗಿ, ತಾಯಿತ ಕಟ್ಟುವುದು, ಪೂಜೆಯನ್ನು ಮಾಡಿಸುವಂತಹ ಮತ್ತು ಗ್ರಹಗತಿಯನ್ನು ಸರಿಮಾಡಲು ಮುಂದಾದ ವೆಂಕಪ್ಪಜೋಯಿಸರನ್ನು ನೋಡಿದ ಹೂವಯ್ಯ ನಗುತ್ತಾ, ಅವರ ಮಾತುಗಳನ್ನು ಟೀಕಿಸುತ್ತಾನೆ. ಜೋಯಿಸ ವೆಂಕಪ್ಪನವರ ಅವೈಜ್ಞಾನಿಕತೆಯನ್ನು, ಅಜ್ಞಾನವನ್ನು ಕಂಡಂತಹ ಹೂವಯ್ಯ ತನ್ನ ನಾಗರೀಕತೆಯ ಪ್ರಜ್ಞೆಯ ಮುಖಾಂತರ ಪ್ರತಿರೋಧವನ್ನು ವ್ಯಕ್ತಪಡಿಸುವಂತಹುದನ್ನು ನಾವು ನೋಡಬಹುದಾಗಿದೆ.

ಹೂವಯ್ಯ ಮತ್ತು ವೆಂಕಪ್ಪಜೋಯಿಸರ ನಡುವೆ ನಡೆದಂತಹ ಸಂಘರ್ಷವೂ ಮಲೆನಾಡಿನಲ್ಲಿರುವಂತಹ ಕಾನೂರಿನ ಜನರ ಜೀವನವು ಸ್ವಲ್ಪ ಅಸ್ತ-ವ್ಯಸ್ತಗೊಂಡಿರುವುದನ್ನು ನಾವು ಇಲ್ಲಿ ನೋಡಬಹುದಾಗಿದೆ. ಹೇಗೆಂದರೆ ಹೂವಯ್ಯ ತಾನು ಪ್ರೀತಿಸಿದಂತಹ ಸೀತೆಯನ್ನು ಕೊನೆಗೂ ಪಡೆಯಲು ಸಾಧ್ಯವಾಗದೇ ಹೋದದು ಮತ್ತು ರಾಮಯ್ಯ ತನ್ನ ತಂದೆ ಹೇಳಿದ ಮಾತನ್ನು ಕೇಳುವ ಮುಖೇನ ಹೂವಯ್ಯನನ್ನು ದ್ವೇಷಿಸುವುದು ಇತ್ಯಾದಿ, ಸೀತೆಯನ್ನು ಸಿಂಗಪ್ಪಗೌಡರ, ಮಗ ಕೃಷ್ಣಪ್ಪನ ಜೊತೆ ಮದುವೆ ನಿಶ್ಚಯವಾಗಿದ್ದು, ಕೆಲವು ಕಾರಣಗಳಿಂದಾಗಿ ದುರಾದೃಷ್ಟವಶಾತ್ ಕೃಷ್ಣಪ್ಪ ಹುಲಿಯ ಬಾಯಿಗೆ ಸಿಕ್ಕು ಮೃತ್ಯು ದೇವತೆಯ ಬಾಯಿಗೆ ಶರಣಾಗುತ್ತಾನೆ. ತದನಂತರದಲ್ಲಿ ರಾಮಯ್ಯನು ತನ್ನ ತಂದೆಯ ಮಾತಿನಂತೆ ಸೀತೆಯನ್ನು ಮದುವೆಯಾಗುತ್ತಾನೆ ಆದರೆ ಮದುವೆಯು ತಂದಂತಹ ಕಷ್ಟಗಳಿಂದಾಗಿ ತಬ್ಬಿಬ್ಬಾದಂತಹ ರಾಮಯ್ಯ ಕಾನೂರು ತನ್ನ ಕಣ್ಣ ಮುಂದೆಯೇ ಪತನವಾಗುತ್ತಿರುವುದನ್ನು ಗಮನಿಸುತ್ತಾ

ಅಂತಿಮವಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾನೆ. ಸೀತೆಯು ಮಾನಸಿಕವಾಗಿ ಬಹಳಷ್ಟು ನೋವನ್ನು ಅನುಭವಿಸುತ್ತಾಳೆ. ಕೊನೆಗೆ ತಾನು ತಂದೆಯ ಜೊತೆಯಲ್ಲಿಯೇ ಉಳಿದುಕೊಳ್ಳುವ ಮುಖಾಂತರ ಹೂವಯ್ಯನಿಗೆ ಆಧ್ಯಾತ್ಮಿಕವಾದಂತಹ ಸಂಗಾತಿಯಾಗಿ ಉಳಿದುಕೊಳ್ಳುವುದು ಎಲ್ಲರ ಗಮನವನ್ನು ಸೆಳೆಯುವಂತಹುದಾಗಿರುತ್ತದೆ. ಇದಕ್ಕೆಲ್ಲಾ ಪ್ರಮುಖವಾದ ಮೂಲಭೂತ ಕಾರಣವೆಂದರೆ ಹೂವಯ್ಯನು ವೆಂಕಪ್ಪಜೋಯಿಸರ ವಿಚಾರಗಳನ್ನು ಗ್ರಹಿಸದೆ ಅದನ್ನು ಕಡೆಗಣಿಸಿದುದೇ ಆಗಿರುತ್ತದೆ. ಒಂದು ವೇಳೆ ವಸಾಹತುಪ್ರಜ್ಞೆಯನ್ನು ಪಡೆದುಕೊಂಡಿದ್ದರೂ ಕೂಡ ತಾನು ಅಲ್ಲಿನ ಸ್ಥಳೀಯತೆಗೆ ತಕ್ಕಂತೆ ತನ್ನನ್ನು ಒಗ್ಗಿಸಿಕೊಂಡು ಹೋಗಿದ್ದರೆ ಹೂವಯ್ಯನಿಗೆ ಖಂಡಿತವಾಗಿಯೂ ಸೀತೆಯು ಸಿಗುತ್ತಿದ್ದಳು ಎಂಬುದರಲ್ಲಿ ಯಾವುದೇ ಸಂಶಯವಿರುವುದಿಲ್ಲ. ಇದಕ್ಕೆ ಪ್ರಮುಖವಾದಂತಹ, ಉದಾಹರಣೆಗಾಗಿ ನಾವು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಒಡಮೂಡಿ ಬರುವ ಮುಕುಂದಯ್ಯನನ್ನು ಮತ್ತು ಅವನ ಬದುಕಿನ ಕ್ರಮವನ್ನು ಮನಗಾಣಬಹುದಾಗಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವಂತಹ ಮುಕುಂದಯ್ಯನು ಅಲ್ಲಿನ ಸ್ಥಳೀಯತೆಗೆ ತನ್ನನ್ನು ಒಗ್ಗಿಸಿಕೊಳ್ಳುವ ಮುಖೇನ ತನ್ನ ಜೀವನವನ್ನು ಸಾಗಿಸುತ್ತಾನೆ. ಆದ ಕಾರಣದಿಂದಲೇ ಅವನು ಬಯಸಿದಂತಹ ಚಿನ್ನಮ್ಮಳನ್ನು ಮದುವೆಯಾಗುತ್ತಾನೆ. ಆದರೆ 'ಕಾನೂರು ಹೆಗ್ಗಡಿತಿ'ಯಲ್ಲಿ ಕಂಡು ಬರುವಂತಹ ಹೂವಯ್ಯ ಅಲ್ಲಿನ ಸ್ಥಳೀಯತೆಗೆ ತನ್ನನ್ನು ತಾನು ಒಗ್ಗಿಸಿಕೊಳ್ಳದೇ ಸ್ವಲ್ಪ ಭಿನ್ನವಾಗಿ ಅಥವಾ ಪರಕೀಯನಾಗಿ ನಿಂತ ಕಾರಣ ಅಲ್ಲಿನ ಪರಿಸರಕ್ಕೆ ಹೊಂದಿಕೊಳ್ಳದೇ ಹೋದ ಕಾರಣದಿಂದಾಗಿ, ತಾನು ಬಯಸಿದಂತಹ ಸೀತೆಯನ್ನು ಕೊನೆಗೂ ಪಡೆಯಲು ಸಾಧ್ಯವಾಗದೆಯೇ ಅವಳನ್ನು ಕಳೆದುಕೊಳ್ಳುವಂತಹ ದೃಶ್ಯವನ್ನು ನಾವು 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಅರಿಯಬಹುದಾಗಿದೆ.

ಒಟ್ಟಾರೆಯಾಗಿ 'ಕಾನೂರು ಹೆಗ್ಗಡಿತಿ'ಯ ಹೂವಯ್ಯನು ಸನಾತನ ಧರ್ಮದ ವೇದಾಂತಗಳ ದರ್ಶನಕ್ಕಿಂತಲೂ ಹೆಚ್ಚಾಗಿ ಬುದ್ಧನ ವಿಚಾರಧಾರೆಗೆ ತನ್ನ ಒಲವನ್ನು ತೋರಿರುವಂತೆ ಕುವೆಂಪುರವರು ತಮ್ಮ ಕಾದಂಬರಿಯಡಿಯಲ್ಲಿ ವ್ಯಕ್ತಪಡಿಸಿರುತ್ತಾರೆ. ಕಾನೂರಿನಲ್ಲಿ ನಡೆದಂತಹ ಎಲ್ಲಾ ಘಟನೆಗಳಿಂದಾಗಿ ಹೂವಯ್ಯನಲ್ಲಿ ಲೌಕಿಕ ಬದುಕಿನ ಕಡೆಗೆ ನಿರಾಶಾಭಾವನೆಗಳು ಅತಿ ಹೆಚ್ಚಾಗಿ ಹೂವಯ್ಯ ತನ್ನನ್ನು ತಾನು ಬುದ್ಧನ ಧ್ಯೇಯ ಮತ್ತು ಧೋರಣೆಗಳಿಗೆ ಒಳಪಡಿಸಿಕೊಳ್ಳುವುದನ್ನು ನಾವು ಗ್ರಹಿಸಬಹುದಾಗಿದೆ. ಮಲೆನಾಡಿಗೆ

ಆಧುನಿಕತೆಯು ಪ್ರವೇಶವನ್ನು ಮಾಡುತ್ತಿದ್ದು, ಅಂತಹ ಆಧುನಿಕತೆಯ ಪ್ರವೇಶದಿಂದಾಗಿ ಮಲೆನಾಡಿಗೆ ಪಾಶ್ಚಾತ್ಯರ ಮುಖೇನ ನೂತನವಾದಂತಹ ಜೀವನಕ್ಕೆ ಸ್ವಾಗತವನ್ನು ಕೋರುತ್ತಿರುವುದನ್ನು ಕಾದಂಬರಿಗಳು ಪರಿಚಯಿಸುತ್ತವೆ. ಒಟ್ಟಾರೆಯಾಗಿ ಮಲೆನಾಡಿನಲ್ಲಿ ಇರುವಂತಹ ಎಲ್ಲ ಜನ ಸಾಮಾನ್ಯರ ಮೇಲೆಯೂ ಆಧುನಿಕತೆಯ ಪ್ರಭಾವವೂ ಇರುವುದನ್ನು ನಾವು ಕಾಣಬಹುದಾಗಿದೆ. ಹಳೆಯ ಕಾಲದ ಪಾರಂಪರಿಕವಾದಂತಹ ಪದ್ಧತಿಗಳಿಂದಾಗಿ ಪ್ರೇರಿತಗೊಂಡಿದ್ದ ಮಲೆನಾಡು ನವನಾಗರೀಕತೆಯ ಕಡೆಗೆ ನಿಧಾನವಾಗಿ ಹೇಗೆ ತನ್ನ ಒಲವನ್ನು ತೋರ್ಪಡಿಸಿತು ಎಂಬುದನ್ನು ನಾವು ಕಾದಂಬರಿಯಲ್ಲಿ ಕುವೆಂಪುರವರ ವಿಚಾರಧಾರೆಯ ಅಭಿವ್ಯಕ್ತಿಯ ಮುಖಾಂತರವಾಗಿ ಕಾಣುತ್ತೇವೆ. ಪಾರಂಪರಿಕವಾದಂತಹ ಪುರೋಹಿತಶಾಹಿಯ ಮೌಢ್ಯಾಚಾರಗಳಾದಂತಹ ಮಾರಿಯ ಹರಕೆಯಾಗಿರಬಹುದು, ದೆಯ್ಯದ ಹರಕೆಯಾಗಿರಬಹುದು ಮುಂತಾದ ಮೂಢ ನಂಬಿಕೆಗಳಿಗೆ ಬದಲಾಗಿ ಮಾನವೀಯವಾದಂತಹ ವಿಚಾರಗಳು ಮಲೆನಾಡಿಗೆ ಬರುವ ಮುಖಾಂತರವಾಗಿ ನವನಾಗರೀಕತೆಯ ಕಡೆಗೆ ಸಾಗುವುದನ್ನು ನಾವು ಗ್ರಹಿಸಬಹುದಾಗಿದೆ.

ಒಂದು ಕಡೆ ನವನಾಗರೀಕತೆಯನ್ನು ಸ್ವೀಕರಿಸುವಂತಹ ಮಲೆನಾಡಿನ ಪ್ರದೇಶವು ಅಲ್ಲಿನ ಪಾರಂಪರಿಕವಾದಂತಹ ವಿಚಾರಗಳೆಲ್ಲವನ್ನು ಶೋಧಿಸುವ ಮುಖಾಂತರ ವೈದಿಕತನದ ಬಗೆಗೆ ತನ್ನದೇ ಆದಂತಹ ಒಂದು ಬಗೆಯ ಪ್ರತಿರೋಧವನ್ನು ವ್ಯಕ್ತಪಡಿಸುತ್ತಿರುವುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಅನಕ್ಷರಸ್ಥರಾಗಿ ಪ್ರಾರಂಭದಲ್ಲಿ ಕಾಣಿಸಿಕೊಂಡಂತಹ ಯುವ ಪೀಳಿಗೆಯೂ ವಸಾಹತುಪ್ರಜ್ಞೆಯ ಮೂಲಕ ಅಕ್ಷರಸ್ಥರಾಗಿ ಮಾರ್ಪಡುವಂತಹ ಅಂಶಗಳನ್ನು ನಾವು ನೋಡಬಹುದಾಗಿದೆ.

ಆಧುನಿಕವಾದ ಶಿಕ್ಷಣ ಮತ್ತು ಹೊಸ ವಿಚಾರಧಾರೆಗಳ ಪ್ರವೇಶದಿಂದಾಗಿ ಮಲೆನಾಡಿನ ಮನುಷ್ಯ ಮತ್ತು ಮನುಷ್ಯರ ನಡುವಿನ ಅಂತರಗಳು ಕಡಿಮೆಯಾಗುವ ಮುಖೇನ ವೈದಿಕ ಮತ್ತು ಅವೈದಿಕರ ನಡುವೆ ಇರುವಂತಹ ಅಂತರಗಳು ನಿಧಾನವಾಗಿ ದೂರವಾಗುತ್ತಿರುವುದನ್ನು ಈ ಕಾದಂಬರಿಗಳು ಸ್ಪಷ್ಟಪಡಿಸುತ್ತವೆ. ಪುರೋಹಿತಶಾಹಿ ಸಂಸ್ಕೃತಿಯು ಸಾವಿರಾರು ವರ್ಷಗಳಿಂದ ಅವೈದಿಕರ ಮೇಲೆ ಬೀರಿದಂತಹ ಹೆಚ್ಚು ಪ್ರಭಾವವೂ ಒಂದು ರೀತಿಯಾದ ಅಜ್ಞಾನ ಮತ್ತು ಮೌಢ್ಯಗಳಿಂದ ಕೂಡಿದ್ದು ಇದರಿಂದ ಬಿಡುಗಡೆಗೊಳ್ಳಲು ಮಲೆನಾಡಿಗೆ ಪ್ರವೇಶ ಮಾಡಿದ ಆಧುನಿಕತೆಯು ಪ್ರಮುಖ ಪಾತ್ರ ವಹಿಸಿರುವುದನ್ನು ನಾವು ಕಾಣುತ್ತೇವೆ. ಈ ರೀತಿಯಾದ

ಪಾರಂಪರಿಕವಾದ ಮೌಢ್ಯತೆಗಳಿಂದಾಗಿ ಪಾರುಮಾಡಲು ಶ್ರಮಿಸಿದಂತಹ ಬುದ್ಧನ ವಿಚಾರಧಾರೆಗಳನ್ನು ಮುಖ್ಯ ಚಿಂತನೆಯಾಗಿ ಗುರ್ತಿಸುವುದರ ಮುಂಖಾತರ ವೈದಿಕತೆಗೆ ಒಂದು ಬಗೆಯಾದಂತಹ ಪ್ರತಿರೋಧವನ್ನು ವ್ಯಕ್ತಪಡಿಸುವುದನ್ನು ನಾವು ಕುವೆಂಪುರವರ ಕಾದಂಬರಿಗಳಲ್ಲಿ ಗುರ್ತಿಸಬಹುದಾಗಿರುತ್ತದೆ.

'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಪುರೋಹಿತಶಾಹಿಯೂ ತಂದಂತಹ ಒತ್ತಡ ಹಾಗೂ ಅವುಗಳು ಹೇರಿದಂತಹ ಮಿಥ್ಯೆಯ ಮೌಢ್ಯತೆಗೆ ವಸಾಹತುಶಾಹಿ ತಂದ ಜ್ಞಾನದ ದೀವಿಗೆಯನ್ನು ಎದುರು-ಬದುರು ಮಾಡುವ ಮೂಲಕ ನೂತನವಾದಂತಹ ಕ್ರಾಂತಿಗೆ ಸಜ್ಜುಗೊಳಿಸುವ ಪ್ರಯತ್ನವಿದೆ. ಕಾದಂಬರಿಯ ಕೊನೆಯ ಕವನದ ಸಾಲುಗಳು ಪುರೋಹಿತಶಾಹಿಯಿಂದ ಬಿಡುಗಡೆ ಪಡೆಯುವ ಹಂಬಲದ ಪ್ರತೀಕವೆ ಆಗಿರುತ್ತದೆ. ಒಟ್ಟಾರೆಯಾಗಿ, ಸ್ಥಳೀಯತೆಗೆ ಸಂಬಂಧಿಸಿದಂತೆ ಅಲ್ಲಿಯ ವಿಚಾರಧಾರೆಗಳನ್ನು ಮೊದಲಿಗೆ ಗುರ್ತಿಸಿಕೊಂಡು ತದನಂತರ ನಿಧಾನವಾಗಿ ಅರಿತುಕೊಂಡು ವಸಾಹತು ಪ್ರಜ್ಞೆಯು ಹೇಗೆ ತನ್ನದೇ ಆದಂತಹ ಪ್ರಭಾವವನ್ನು ಬೀರಿತ್ತು ಎಂಬುದನ್ನು ನಾವು ತಿಳಿಯಬಹುದು. ವಸಾಹತುಶಾಹಿಯೂ ಹೊಸದಾದಂತಹ ನೂತನ ಪ್ರಜ್ಞೆಯೊಂದಿಗೆ ಮಲೆನಾಡನ್ನು ಪ್ರವೇಶಿಸುವ ಮೂಲಕ ಅಲ್ಲಿ ಅದೊಂದು ಹೊಸ ಮನಸ್ಥಿತಿಯನ್ನು ಸೃಷ್ಠಿ ಮಾಡಿತು ಎಂಬುದು ಇಲ್ಲಿ ವ್ಯಕ್ತವಾಗುತ್ತದೆ.

ತಮ್ಮ ಈ ಎರಡೂ ಕಾದಂಬರಿಗಳಲ್ಲಿನ ವಾದ-ವಿವಾದಗಳ ಅಡಿಯಲ್ಲಿ ಬರುವ ವೈಚಾರಿಕ ಗೊಂದಲಗಳು ಇರಬಾರದೆಂಬ ಕಾರಣಕ್ಕಾಗಿ ಲೇಖಕರ ಸಂವೇದನೆ ನಿರೂಪಕನ ಸ್ಥಾನದಲ್ಲಿ ನಿಂತುಕೊಳ್ಳುವ ಮುಖಾಂತರ ಅದಕ್ಕೆ ಸಂಬಂಧಿಸಿದ ವಿಚಾರಧಾರೆಗಳನ್ನು ಸ್ಪಷ್ಟಪಡಿಸುವ ಕೆಲಸವಾಗಿದೆ. ಅರ್ಥಗರ್ಭಿತವಾಗಿ ಉಂಟಾದಂತಹ ಭೌತಿಕ ಬದಲಾವಣೆಗಳಿಗೂ ಮತ್ತು ಅಲ್ಲಿನ ಪರಿಸರಕ್ಕೆ ಸಂಬಂಧಿಸಿದಂತಹ ಸ್ಥಳೀಯ ಕುಟುಂಬದ ವ್ಯವಸ್ಥೆಗಳಲ್ಲಿ ಉಂಟಾದಂತಹ ವಿವಿಧ ರೀತಿಯಾದಂತಹ ಅವಸ್ಥಾಂತರಗಳಿಗೂ ಎಂತಹ ಸಂಬಂಧಗಳಿವೆ ಎಂಬುವುದನ್ನು ಕುವೆಂಪುರವರ ಕಾದಂಬರಿಗಳಡಿಯಲ್ಲಿ ಕೆಲವೊಂದು ರೀತಿಯಾದಂತಹ ಸೂಕ್ಷ್ಮವಾದ ಒಳನೋಟಗಳನ್ನು ಕಾಣುತ್ತೇವೆ. ಇಡೀ ಗ್ರಾಮೀಣ ಜನರ ಜೀವನ ಬದುಕಿನ ನೆಲೆಯಲ್ಲಿ ವ್ಯಕ್ತಿಗಳ ನಿರ್ವಚನೆಗಳ ನೆಲೆಯನ್ನು ಕಟ್ಟಿಕೊಡುವ ಮುಖೇನ ಮನುಷ್ಯರು ಬದುಕಿ

ಬಾಳುವಂತಹ ಇಡೀ ಪರಿಸರದ ನಿರ್ವಹಣೆಯ ಸಂದರ್ಭಗಳನ್ನು ನಾವು ಕುವೆಂಪುರವರು ರಚಿಸಿರುವಂತಹ ಕಾನೂರು ಹೆಗ್ಗಡಿತಿಯಂತಹ ಕಾದಂಬರಿಗಳಲ್ಲಿ ಮನಗಾಣಬಹುದಾಗಿದೆ.

ಕುವೆಂಪುರವರು ತಮ್ಮ ಎರಡೂ ಕಾದಂಬರಿಗಳಲ್ಲಿ ನಿರ್ಮಿಸಿದ ಹೂವಯ್ಯ ಮತ್ತು ಮುಕುಂದಯ್ಯ ಪುರುಷ ಪಾತ್ರಗಳೆರಡೂ ಸಹ ವೈಚಾರಿಕ ಪ್ರಜ್ಞೆಯನ್ನಿಟ್ಟುಕೊಂಡೇ ಬೆಳೆದಿವೆ. ಆದರೆ ಅಕ್ಷರ ಜ್ಞಾನದ ಮುಖೇನ ವಿದ್ಯೆಯನ್ನು ಪಡೆದ ಹಾಗೂ 'ಕಾನೂರು ಹೆಗ್ಗಡಿತಿ'ಯಲ್ಲಿ ಕಾಣಿಸಿಕೊಂಡಂತಹ ಹೂವಯ್ಯ ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕಾಣಿಸಿಕೊಂಡಂತಹ ಮುಕುಂದಯ್ಯ ಇವರಿಬ್ಬರ ವೈಚಾರಿಕತೆಯ ಗ್ರಹಿಕೆಯಲ್ಲಿ ಭಿನ್ನತೆ ಇದೆ. ಆದರೆ ಉಳಿದಂತಹ ಕೆಳವರ್ಗದ ಜನರ ದಾರ್ಶನಿಕತೆಯೂ ಅವರಿಬ್ಬರಿಗಿಂತಲೂ ಭಿನ್ನವಾಗಿ ಕಾಣಿಸುತ್ತದೆ ಎಂಬುದನ್ನು ನಾವಿಲ್ಲಿ ತಿಳಿಯಬಹುದಾಗಿದೆ. ಆದರೆ ಹೂವಯ್ಯ ಮತ್ತು ಮುಕುಂದಯ್ಯರ ವೈಚಾರಿಕತೆಯೂ ವಿವೇಕಾನಂದ ಮತ್ತು ಗಾಂಧಿಯಂತವರ ಪ್ರೇರಣೆಗೆ ಒಳಗಾಗುವುದರ ಮುಖಾಂತರವಾಗಿ ರೂಪುಗೊಂಡಿರಬಹುದು ಎಂಬುದುದನ್ನು ನಾವಿಲ್ಲಿ ಗುರ್ತಿಸಬಹುದಾಗಿದೆ. ಪುರೋಹಿತಶಾಹಿಗೆ ಸಂಬಂಧಿಸಿದಂತೆ ನಿರಂತರವಾಗಿ ಪ್ರತಿರೋಧವನ್ನು ವ್ಯಕ್ತಪಡಿಸಿದ ಬುದ್ಧ, ಬಸವ, ಮೊದಲಾದವರ ಕ್ರಾಂತಿಯನ್ನು ಹಿಮ್ಮೆಟ್ಟಿಸುವ ಮುಖಾಂತರ ತನ್ನದೇ ಆದಂತಹ ಪ್ರಾಬಲ್ಯಗಳನ್ನು ಪುನಃ ಮತ್ತಷ್ಟು ಪ್ರಬಲಗೊಳಿಸುವಂತಹ ಸ್ಥಳೀಯತೆಯ ಪುರೋಹಿತಶಾಹಿಯ ಲಕ್ಷಣಗಳನ್ನು ಕುವೆಂಪು ಗುರ್ತಿಸಿ ಅದನ್ನು ಖಂಡಿಸುತ್ತಾರೆ. ಇದಕ್ಕೆ ಪೂರಕವಾಗಿ ವಿವೇಕಾನಂದರ ಭಾಷಣದಿಂದಾಗಿ ಆಯ್ದುಕೊಂಡಿರುವಂತಹ ಕೆಲವು ಮಾತುಗಳನ್ನು ಹಾಗೂ ಕೆಲವು ವಿಚಾರಧಾರೆಗಳನ್ನು ನಾವು ಇಲ್ಲಿ ನೋಡಬಹುದಾಗಿದೆ. ಇಂದಿನ ಅಂದರೆ ಪ್ರಸ್ತುತ ಜಾಗತೀಕರಣ ಹಾಗೂ ಮಾಹಿತಿ – ತಂತ್ರಜ್ಞಾನಗಳ ಕಾಲದಲ್ಲಿಯೂ ಕೂಡ ಪುರೋಹಿತವರ್ಗಗಳು ತನ್ನ ಸ್ವಯಂ ಮೂಲಭೂತವಾದ ಅಂಶಗಳಿಂದಾಗಿ ನಿರ್ಮಾಣ ಮಾಡುತ್ತಿರುವಂತಹ, ಹಿಂಸೆಯ ಅಂಶಗಳನ್ನು ಅರ್ಥಪೂರ್ಣವಾಗಿ ಇಲ್ಲಿ ಗ್ರಹಿಸಬಹುದಾಗಿದೆ

"ಅದನ್ನೇ ಕುರಿತು ಸ್ವಾಮಿ ವಿವೇಕಾನಂದರು ಒಂದು ಭಾಷಣದಲ್ಲಿ ಪುರೋಹಿತ ವರ್ಗವನ್ನು ಹೀಗೆ ಖಂಡಿಸಿದ್ದಾರೆ:

"ಶೂದ್ರ ಸಮಾಜವನ್ನು ತನ್ನ ಕಬ್ಬಿಣದ ಕರಾಳ ಮುಷ್ಟಿಯ ಸಹಸ್ರ ಪಾಶಗಳಿಂದ ಬಿಗಿದು ಬಂಧಿಸಿಟ್ಟುಕೊಳ್ಳುವ ಉದ್ದೇಶದಿಂದ, ದೇಹ ಮತ್ತು ಮನಸ್ಸಿನ ಶುದ್ಧೀಕರಣದ ಬಾಹ್ಯ

ಸಾಧನೆಗಳೆಂಬ ನೆವದಲ್ಲಿ ತನ್ನ ಸುತ್ತಲೂ ಸುತ್ತಿಕೊಂಡ ಅನಂತ ಸಂಖ್ಯೆಯ ಕರ್ಮ, ಕ್ರಿಯೆ ಮತ್ತು ಆಚಾರ ಸಮೂಹ ರೂಪದ ಕೊನೆಗಾಣದ ಕಣ್ಣಿನ ಬಲೆಯಲ್ಲಿ ಸಿಕ್ಕಿಕೊಂಡು, ಪುರೋಹಿತಶಾಹಿ ಉದ್ಧಾರದ ಆಶಾಲವಲೇಶವಿಲ್ಲದೆ, ಅಪಾದಮಸ್ತಕ ಗೋಜು ಬಿಗಿದುಕೊಂಡು ಈಗ ಸುಸ್ತಾಗಿ, ಸಂಪೂರ್ಣ ಹತಾಶವಾಗಿ, ಮೃತಪಾಯವಾಗಿ ಪತಿತವಾಗಿ ನಿದ್ದೆ ಹೋಗುತ್ತಿದೆ. ಈಗ ಆ ಬಲೆಯಿಂದ ಅದಕ್ಕೆ ಬಿಡುಗಡೆಯೆ ಇಲ್ಲವಾಗಿದೆ. ಆ ಬಲೆಯನ್ನೇನಾದರೂ ಹರಿದರೆ ಸಾಕು, ಆ ಪುರೋಹಿತ ಪುರೋಹಿತಶಾಹಿ ಬುಡಮುಟ್ಟ ಅಲ್ಲಾಡಿ ಹೋಗುತ್ತದೆ!. ...."

"ಪ್ರತಿಯೊಬ್ಬ ಮಾನವನಲ್ಲಿಯೂ ಪ್ರಗತಿಯ ಆಕಾಂಕ್ಷೆ ಸ್ವಾಭಾವಿಕವಾಗಿ ಬೇರೂರಿರುತ್ತದೆ. ...."

"ಭರತಖಂಡದ ಪತನಕ್ಕೆ ಮುಖ್ಯ ಕಾರಣವೆಂದರೆ, ರಾಜವರ್ಗದವರ ಮತ್ತು ಪುರೋಹಿತವರ್ಗದವರ ಅಧಿಕಾರ ಬಲದಿಂದ ವಿದ್ಯಾಬುದ್ಧಿಗಳ ಸರ್ವ ಸ್ವಾಮ್ಯವೂ ಅತ್ಯಲ್ಪ ಸಂಖ್ಯೆಯ ಕೆಲವೇ ಕೆಲವು ಬ್ರಾಹ್ಮಣರ ಹಸ್ತಗತವಾದದ್ದು."

"ಪುರೋಹಿತ ವರ್ಗದ ಪತನಕ್ಕೆ ಯಾವನಾದರೊಬ್ಬ ವ್ಯಕ್ತಿಯ ಅಥವಾ ಯಾವುದಾದರೂ ಒಂದು ಗುಂಪಿನ ಹೊಣೆ ಹೊರಿಸುವ ಯಾರೇ ಆಗಲಿ ತಿಳಿಯಬೇಕು, ಕರ್ಮತತ್ವದ ಅನಿವಾರ್ಯತೆಗೆ ವಿಧೇಯವಾಗಿ, ಬ್ರಾಹ್ಮಣ ಜಾತಿ ತನ್ನ ಗೋರಿಯನ್ನು ತಾನೆ ತನ್ನ ಕೈಯಿಂದಲೆ ಕಟ್ಟಿಕೊಳ್ಳುತ್ತಿದೆ ಎಂದು ಮತ್ತು ಹಾಗಾಗತಕ್ಕದ್ದೆ ಸರಿ ಎಂದೂ, ಉಚ್ಚವರ್ಣದ ಮತ್ತು ಉಚ್ಛವರ್ಗದ ಪ್ರತಿಯೊಂದು ಜಾತಿಯೂ ತನ್ನ ಕೈಯಿಂದಲೇ ತನ್ನ ಸ್ಮಶಾನಚಿತೆಯನ್ನು ರಚಿಸಿಕೊಳ್ಳುವುದರ ಅದರ ಪ್ರಧಾನ ಕರ್ತವ್ಯವೇ ಆಗಬೇಕಾಗುತ್ತದೆ.!"[8]

ಕುವೆಂಪುರವರು ತಮ್ಮೊಳಗಿನ ವಿವೇಕಾನಂದತನವನ್ನು ಅಖಿಲ ಭಾರತೀಯವನ್ನಾಗಿ ಮಾಡುವಂತಹ ಪ್ರಯತ್ನದಿಂದಾಗಿ ಮುನ್ನಡೆ ಸಾಗಿಸುವ ಮುಖೇನ ವೇದಾಂತ ಮೂಲಗಳನ್ನು ವಿಶ್ಲೇಷಿಸಿದರೆ ಅವರ ಆ ದಾರಿಗೆ ಮಲೆನಾಡಿನಲ್ಲಿ ವಾಸಿಸುತ್ತಿದ್ದಂತಹ ಸ್ಥಳೀಯರಾದ ಗುತ್ತಿ, ಐತ, ಪೀಂಚಲು, ಬೈರ, ಸಿದ್ಧರು ವಿರೋಧಭಾಸವಾಗಿ ಕಾಣಿಸಿಕೊಳ್ಳುತ್ತಾರೆ. ಆದ್ದರಿಂದಲೇ ಎರಡೂ ರೀತಿಯಾದಂತಹ ವೈಚಾರಿಕತೆಗಳನ್ನು ಯಾವ ನೆಲೆಯಿಂದಲೇ ಗ್ರಹಿಸಬೇಕೆಂಬುದು ಸಮಸ್ಯೆಯಾಗಿ ಕಾಣುತ್ತದೆ. ವಿವೇಕಾನಂದರ ತತ್ವದ ವೈಚಾರಿಕತೆಯನ್ನು ಕಲಿತಂತಹ ಹೂವಯ್ಯರಲ್ಲಿ ಬೇಗನೆ ಬೆಳಕಿಗೆ ಬಂದಂತೆ ಉಳಿದಂತವರಿಗೆ ಅಂದರೆ ಶಿಕ್ಷಣದಿಂದಾಗಿ

ವಂಚಿತರಾದಂತಹ ಕೆಳವರ್ಗದವರಿಗೆ ಅಷ್ಟು ಸರಳವಾಗಿ ಅದು ದೊರೆತಂತೆ ಕಾಣುತ್ತಿಲ್ಲ ಎಂಬುದನ್ನು ಕುವೆಂಪುರವರು 'ಕಾನೂರು ಹೆಗ್ಗಡಿತಿ'ಯನ್ನು ವ್ಯಕ್ತಪಡಿಸಿರುತ್ತಾರೆ. ಇಲ್ಲಿ ಬರುವಂತಹ ಹೂವಯ್ಯ ರಾಮಯ್ಯನವರ ಮುಖಾಂತರವಾಗಿ ಮಾನವತಾವಾದವನ್ನು ಗುರ್ತಿಸುವ ಮುಖೇನ ಮನುಷ್ಯ ಚೇತನದಲ್ಲಿ ಆಗುವಂತಹ ಒಟ್ಟಾರೆ ಬದಲಾವಣೆಗಳನ್ನು ನಾವು ಅರಿತುಕೊಳ್ಳಬಹುದಾಗಿದೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಕೂಡ ಮನುಷ್ಯತ್ವದ ಎಲ್ಲಾ ರೀತಿಯಾದಂತಹ ಸಾಧ್ಯತೆಗಳು ಇರುವುದನ್ನು ಇಲ್ಲಿ ಮಾನವತಾವಾದವು ಒಪ್ಪಿಕೊಳ್ಳುವಂತಹುದನ್ನು ನಾವು ಅರ್ಥಮಾಡಿಕೊಳ್ಳಬೇಕು. ಕುವೆಂಪುರವರ ಕಾದಂಬರಿಗಳಲ್ಲಿ ವ್ಯಕ್ತಗೊಂಡಂತಹ ಆಧುನಿಕತೆಯ ಕೇವಲ ಭೌತಿಕ ಪ್ರವೇಶದಿಂದಾಗಿ ಆದಂತಹ ಅನುಭವಗಳನ್ನಾಗಿ ಮಾತ್ರ ಗ್ರಹಿಸದೆಯೇ ಕಾದಂಬರಿಗಳನ್ನು ಇತರೆ ಚರ್ಚೆಗಳಿಗೂ ವಿಸ್ತರಿಸಿಕೊಂಡಿರುವುದನ್ನು ನಾವು ಗಮನಿಸಬಹುದಾಗಿದೆ. ಆಧುನಿಕತೆ ಅಂದರೆ ಉದಾಹರಣೆಗೆ ನಗರೀಕರಣ, ಔದ್ಯೋಗಿಕರಣ, ವಿಜ್ಞಾನ ಹಾಗೂ ತಂತ್ರಜ್ಞಾನ ಕ್ಷೇತ್ರಗಳಲ್ಲಾದ ಪ್ರಗತಿ ಎಂಬುದು ನಮ್ಮ ಗ್ರಹಿಕೆಯಾದರೆ ಅದನ್ನು ಮೀರಿ ಸಹಜವಾಗಿಯೇ ವಸಾಹತುಶಾಹಿ ಸ್ವಲ್ಪ ಬದಲಾವಣೆಗಳನ್ನು ತಂದಿರುವುದನ್ನು ಗಮನಿಸಬಹುದಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ವಸಾಹತುಶಾಹಿ ಪ್ರವೇಶಗೊಂಡ ಮೇಲೆ ಮಲೆನಾಡಿನ ಪ್ರದೇಶವೂ ಆಧುನಿಕತೆಯ ಕಡೆಗೆ ತನ್ನ ಹೆಜ್ಜೆಯನ್ನಿಡುವ ಮುಖೇನ ಜನರ ಜೀವನದ ಕ್ರಮದಲ್ಲಿ ಹೇಗೆ ಮಾರ್ಪಾಟುಗಳು ಉಂಟಾಯಿತು ಎಂಬುದನ್ನು ಗ್ರಹಿಸಬಹುದಾಗಿದೆ.

'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಿಗೆ ಸಂಬಂಧಿಸಿದಂತೆ ಹಾಗೂ ಅಲ್ಲಿನ ಪರಿಸರಕ್ಕೆ ಸಂಬಂಧಿಸಿದಂತೆ ಸ್ಥಳೀಯತೆಯನ್ನು ಹಾಗೂ ವಸಾಹತುವಿಗೆ ಅನ್ವಯವಾಗವಂತಹ ಅಂಶಗಳನ್ನು ಕುರಿತಾಗಿ ಡಾ.ಕರೀಗೌಡ ಬೀಚನಹಳ್ಳಿಯವರ ವಿಚಾರವನ್ನು ನಾವಿಲ್ಲಿ ನೋಡಬಹುದಾಗಿದೆ.

"ಆಧುನಿಕ ಕನ್ನಡ ಸಾಹಿತ್ಯದ ಬಹುಮುಖ್ಯ ಲೇಖಕರಲ್ಲಿ ಕುವೆಂಪು ಒಬ್ಬರು. ಅವರ ಒಟ್ಟು ಕೃತಿ ಸಮೂಹ ಹೊಂದಿರುವ ಅರ್ಥ ಪರಂಪರೆಗಳು ಅವರನ್ನು ವಿಶಿಷ್ಟ ಲೇಖಕರನ್ನಾಗಿ ಸಮರ್ಥಿಸುತ್ತದೆ. ಕುವೆಂಪು ಅವರನ್ನು ಕಾಡುವ ಅನೇಕ ಪ್ರಶ್ನೆಗಳು. ಅವರ ಕೃತಿಗಳಲ್ಲಿ ಮೈಪಡೆದುಕೊಳ್ಳುತ್ತವೆ. ಪರಿಸರವನ್ನು ವಿಶ್ಲೇಷಣೆಗೆ ಗುರಿಮಾಡುತ್ತವೆ ಹಾಗೂ ಅತ್ಯಂತ ಸಂಕೀರ್ಣವಾದ ಬದುಕನ್ನು ಅನಾವರಣಗೊಳಿಸುತ್ತವೆ. ಭಾರತೀಯ ಹಾಗೂ ಪ್ರಾದೇಶಿಕ

ಬದುಕಿನಲ್ಲಿ ಏರ್ಪಡುತ್ತಿದ್ದ ಸ್ಥಿತ್ಯಂತರಗಳನ್ನು, ತಲ್ಲಣಗಳನ್ನು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಗೆ ಒಳಗುಮಾಡುತ್ತವೆ. ಈ ಮುಖೇನ ಇಪ್ಪತ್ತನೆಯ ಶತಮಾನದ ಅಗಾಧ ಕನ್ನಡ ಸಾಂಸ್ಕೃತಿಕ ಚರಿತ್ರೆಯನ್ನು ತಮ್ಮ ಕಥಾನಕದ ಮುಖೇನ ಕಟ್ಟಿಕೊಡುತ್ತಾರೆ. ಆಕ್ರಮಣಶೀಲ ವಸಾಹತುಶಾಹಿ ವ್ಯವಸ್ಥೆಯ ಪ್ರಾದೇಶಿಕ ಪರಿಸರ, ಸಂಸ್ಕೃತಿಯ ಮೇಲೆ ಹೇಗೆ ಮಾರಕವಾಯಿತು? ಎಂಬ ಸಂಗತಿಗಳನ್ನು ಕುವೆಂಪು ಅವರ ಕಾದಂಬರಿಗಳು ವಿಶ್ಲೇಷಣೆಗೆ ಗುರಿಮಾಡಿದೆ. ಗ್ರಾಮೀಣ ಜೀವನದ ನೆಲೆಯಲ್ಲಿ ವ್ಯಕ್ತಿಯ ವಿಘಟನೆಯ ನೆಲೆಗಳನ್ನು ಕಟ್ಟಿಕೊಡುತ್ತಲೇ, ವ್ಯಕ್ತಿ ಬದುಕಿಬಾಳುವ ಇಡೀ ಪರಿಸರದ ಘಟನೆಯ ಸಂದರ್ಭವನ್ನು ಅವರ ಕಾದಂಬರಿಗಳು ಹಿಡಿದಿಟ್ಟಿವೆ. ವಸಾಹತುಶಾಹಿ ಹುಟ್ಟು ಹಾಕಿದ ಕಥನ ಈ ಶತಮಾನದ ಮಹತ್ವದ ಕೊಡುಗೆಯಾಗಿದೆ."[9]

ಕುವೆಂಪುರವರು ಒಟ್ಟಾರೆಯಾಗಿ ತಮ್ಮ ಎರಡೂ ಕಾದಂಬರಿಗಳಲ್ಲಿ ಅಲ್ಲಿ ಕಂಡು ಬರುವಂತಹ ಮನುಷ್ಯ ಪರಿಸರ ಸಂಬಂಧಗಳು ಮತ್ತು ಅಂಥ ಪರಿಸರದ ಮೇಲೆ ಆಕ್ರಮಣವನ್ನು ನಡೆಸುವಂತಹ ವಸಾಹತುಶಾಹಿಗೂ ನಡುವೆ ಏರ್ಪಡುವಂತಹ ಹಲವಾರು ರೀತಿಯಾದ ಸಂಘರ್ಷಗಳನ್ನು ನಾವು ಮನಗಾಣಬಹುದಾಗಿದೆ. ಒಟ್ಟಾರೆಯಾಗಿ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ನವ ನೂತನವಾದ ಪರಿಸರವನ್ನು ಸೃಷ್ಟಿಸುವ ಮುಖಾಂತರ ಆಧುನಿಕ ಪ್ರಪಂಚಕ್ಕೆ ಅಲ್ಲಿನ ಜನರು ತಮ್ಮ ಬದುಕನ್ನು ತೆರೆದುಕೊಳ್ಳುವ ಹಾಗೆ ಅಂದರೆ ಸಂಪೂರ್ಣವಾಗಿ ನವನಾಗರೀಕತೆಯ ಪ್ರಜ್ಞೆಯನ್ನು ಅಳವಡಿಸಿಕೊಂಡು ತಮ್ಮ ಜೀವನವನ್ನು ಸಾಗಿಸುವಂತೆ ಚಿತ್ರಿಸಿರುವುದು ಕಂಡು ಬರುತ್ತದೆ. ಆದರೆ ಕಾನೂರನ್ನು ಪ್ರವೇಶಿಸುತ್ತಿರುವ ಜಾಗತಿಕ ಸುದ್ದಿಗಳು ಅಲ್ಲಿನ ಪರಿಸರದಲ್ಲಿಯೇ ಅಂದರೆ ನವನಾಗರೀಕತೆಯನ್ನು ಸ್ವೀಕರಿಸುವಂತಹ ಪರಿಸರದಡಿಯಲ್ಲಿ ಮೊಳೆಯುತ್ತಿರುವ ಅಸಂಖ್ಯಾತವಾದಂತಹ ಆತಂಕ, ತಲ್ಲಣ ಹಾಗೂ ಹೊಸ ವಿಚಾರಗಳನ್ನು ಹೇಗೆ ಅನುಕರಣೆಗೆ ಒಳಪಡಿಸುತ್ತಿದೆ ಎಂಬುದು ಗ್ರಹಿಕೆಗೆ ಸಂಬಂಧಿಸಿದೆ.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ವಸಾಹತುಶಾಹಿ ಮತ್ತು ಸ್ಥಳೀಯತೆಗೆ ಸಂಬಂಧಿಸಿದಂತೆ ವಸಾಹತುಶಾಹಿಯ ಒಂದು ಸಂದರ್ಭವನ್ನು ಪ್ರಶ್ನಿಸುವಂತೆಯೇ ಸಾಂಪ್ರದಾಯಿಕ ಗೊಡ್ಡು ನಂಬಿಕೆಗಳನ್ನೂ ಪ್ರಶ್ನಿಸುವ ಮುಖಾಂತರ ಅಲ್ಲಿನ ಜನರ ನಂಬಿಕೆಗಳನ್ನು, ಪ್ರಪಂಚದಲ್ಲಿ ಈಗಾಗಲೇ ಜನರು ತಮ್ಮ ಜೀವನವನ್ನು ನಡೆಸುವ ಸಲುವಾಗಿ

ಇಟ್ಟುಕೊಂಡಿರುವಂತಹ ನೆಲೆಗಳನ್ನು ಇವೆರಡನ್ನೂ ವಿಮರ್ಶಾತ್ಮಕವಾಗಿ ವಾಗ್ವಾದಕ್ಕೆ ಒಡ್ಡುವುದನ್ನೂ ಗ್ರಹಿಸಬಹುದಾಗಿದೆ. ಪಶ್ಚಿಮ ಕಡೆಯಿಂದಾಗಿ ಒಡಮೂಡಿ ಬಂದಂತಹ ಪರಕೀಯರ ಪ್ರಭಾವಗಳು ಹಾಗೂ ನಮ್ಮ ಕನ್ನಡ ಪರಂಪರೆಯಲ್ಲಿಯೇ ಸ್ಥಿತಗೊಂಡಿರುವಂತಹ, ನಮ್ಮ ಸಂಸ್ಕೃತಿಯಲ್ಲಿಯೇ ನೆಲೆಗೊಂಡಿರುವಂತಹ ಅನೇಕ ರೀತಿಯಾದಂತಹ ಅಸಾಂಗತ್ಯಗಳ ವಿರುದ್ಧವಾಗಿ ರಚನೆಗೊಂಡಿರುವಂತಹ ಹಲವಾರು ಪ್ರತಿಭಟನೆಯ ನೆಲೆಗಳನ್ನು ಒಟ್ಟಾರೆಯಾಗಿ ಕುವೆಂಪುರವರ ಕಾದಂಬರಿಗಳು ತಮ್ಮದೇ ಆದಂತಹ ವಾಗ್ವಾದಗಳನ್ನು ವ್ಯಕ್ತಪಡಿಸುವುದನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ.

ಕುವೆಂಪುರವರು ಕನ್ನಡ ಸಾಹಿತ್ಯ ಪರಂಪರೆಯಡಿಯಲ್ಲಿ ಕಂಡುಬರುವಂತಹ ನಮ್ಮ ಸಂಸ್ಕೃತಿಯ ಒಂದು ಜೀವಂತವಾಗಿರುವುದಂತಹುದರ ಒಂದು ಚಿತ್ರಣವನ್ನು ಹಾಗೂ ಅದರ ಅವನತಿಯ ಚಿತ್ರಣವನ್ನು ಕಾದಂಬರಿಗಳಲ್ಲಿ ಒಂದು ಮಹತ್ತರವಾದ ಚರ್ಚೆಗೆ ಒಳಪಡಿಸಿರುತ್ತಾರೆ. ಅಂದರೆ ಮೊದಲಿನಿಂದ ನಮ್ಮದೇ ಆದ ಒಂದು ಸಂಪ್ರದಾಯವಾಗಿ ಬೆಳೆದುಕೊಂಡು ಬಂದಂತಹ ಕೆಲವೊಂದು ಅಂಶಗಳನ್ನು ನಾವು ಈ ಸಂದರ್ಭದಲ್ಲಿ ಗಣನೆಗೆ ತೆಗೆದುಕೊಳ್ಳಬಹುದಾಗಿರುತ್ತದೆ. ಅಂದರೆ ಉದಾಹರಣೆಗೆ ದೇವರ ಪರಿಕಲ್ಪನೆಯಾಗಿರಬಹುದು ಅಥವಾ ದೇವಾನು ದೇವತೆಗಳ ನಿವಾಸವಾಗಿರುವಂತಹ ಸ್ವರ್ಗದ ಪರಿಕಲ್ಪನೆಯಾಗಿರಬಹುದು. ಸೂಕ್ಷ್ಮವಾಗಿ ಸ್ಥಳೀಯರ ನಂಬಿಕೆಗಳೆಂದರೆ ಯಾರು ತಮ್ಮ ಸನ್ನಡತೆ, ಸತ್ಕಾರ್ಯಗಳ ಮುಖಾಂತರವಾಗಿ ತಮ್ಮ ಜೀವನವನ್ನು ಸಾಗಿಸುವಂತಹವರು ಸ್ವರ್ಗವನ್ನು ಸೇರುತ್ತಾರೆ. ತಮ್ಮ ಜೀವನವನ್ನು ಸನ್ನಡತೆ, ಸತ್ಕಾರ್ಯಗಳಿಗೆ ಒಗ್ಗಿಸಿಕೊಳ್ಳದೇ ಹೋಗುವಂತಹವರು ನರಕಕ್ಕೆ ಹೋಗುತ್ತಾರೆಂಬ ಪರಿಕಲ್ಪನೆಗಳಾಗಿರಬಹುದು ಮತ್ತು ಧಾರ್ಮಿಕವಾದಂತಹ ನಂಬಿಕೆಗಳಿಗೆ ಮಲೆನಾಡಿನ ಪರಿಸರವು ತನ್ನನ್ನು ತಾನು ಒಗ್ಗಿಸಿಕೊಂಡಿರುವುದು ನಮ್ಮ ಗಮನಕ್ಕೆ ಬರುತ್ತದೆ. ಆದರೆ ಅದೇ ನಮ್ಮ ಸಂಸ್ಕೃತಿಯ ಮೇಲೆ ಪಾಶ್ಚಾತ್ಯರ ಅಥವಾ ಅನ್ಯ ಸಂಸ್ಕೃತಿಯೂ ತನ್ನದೇ ಆದಂತಹ ಆಹ್ವಾನವನ್ನು ನೀಡುವ ಮೂಲಕ ಮಲೆನಾಡನ್ನು ಪ್ರವೇಶಿಸಿ ಅಲ್ಲಿ ಕೆಲವೊಂದು ಪರಿವರ್ತನೆಯನ್ನು ತರಲು ಮಾಡುವಂತಹ ಪ್ರಯತ್ನಗಳನ್ನು ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಭಾರತೀಯ ಹಾಗೂ ಪಾಶ್ಚಿಮಾತ್ಯರ ಮೂಲ ವಿಚಾರಧಾರೆಗಳ ಬಗೆಗೆ ತೋರಿಸಿದಂತಹ ಆಕರ್ಷಣೆ ಮತ್ತು ವಿಕರ್ಷಣೆಗಳ ಮೂಲಕ ಅತ್ಯಂತ ಸಂಕೀರ್ಣವಾಗಿ ಮೂಡಿ ಬಂದಿರುವುದನ್ನು ನಾವು ಗ್ರಹಿಸಬಹುದಾಗಿದೆ. ಒಟ್ಟಾರೆಯಾಗಿ ಅಂದಿನ ಮಲೆನಾಡಿನ ಪರಿಸರದಲ್ಲಿ ಒಳಗೊಂಡಿರುವ ಜನರ ಮನಸ್ಥಿತಿಯೇ ವಿಶಿಷ್ಟವಾದ ಗೊಂದಲ ಹಾಗೂ

ದ್ವಂದ್ವಗಳಿಗೆ ಗುರಿಯಾಗುವುದರ ಮೂಲಕ ನಮ್ಮ ಸ್ಥಳೀಯರ ಸಂಸ್ಕೃತಿಯೂ ಸೇರಿಕೊಂಡು ಒಂದು ನೂತನವಾದ ವಾತಾವರಣವನ್ನೇ ಸೃಷ್ಟಿಮಾಡಿತ್ತು. ಇದರ ಮುಖೇನವಾಗಿ ಕಂಡು ಬಂದಂತಹ ಎಲ್ಲಾ ರೀತಿಯಾದಂತಹ ಅಪಮೌಲ್ಯಗಳನ್ನು ಎದುರಿಸುವಂತಹುದು ಅನಿವಾರ್ಯವಾದುದಾಗಿದೆ. ಬ್ರಿಟಿಷರ ಒಂದು ಹೊಸ ಶಿಕ್ಷಣ ಪದ್ಧತಿಯೂ ತನ್ನದೇ ಆದಂತಹ ರಾಜಕೀಯವಾದ ಅನುಭವಗಳನ್ನು ದಕ್ಕಿಸಿಕೊಳ್ಳುವ ಮುಖೇನ ವಿಕಾಸವಾಗಿದ್ದರೂ ಕೂಡ ಅದರ ಮುಖಾಂತರ ಹೊಸ-ಹೊಸ ವಿಚಾರಗಳು ನಮ್ಮನ್ನು ಆವರಿಸಿಕೊಳ್ಳುವುದನ್ನು ಅದರ ಮುಖೇನವಾಗಿ ಹಲವಾರು ಬದಲಾವಣೆಗಳನ್ನು ಸಹ ಕಾಣಬಹುದಾಗಿದೆ.

'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಮುಖ್ಯವಾಗಿ ಕುವೆಂಪುರವರು ವಸಾಹತುಶಾಹಿಯ ಬಗ್ಗೆ ಹಾಗೂ ಸ್ಥಳೀಯತೆಯ ಬಗ್ಗೆ ಅಂದರೆ ಮಲೆನಾಡಿನ ಜನರ ಬದುಕಿನ ಕ್ರಮವನ್ನು ಅಲ್ಲಿನ ಆಚರಣೆಗಳನ್ನು ಕೆಲವೊಂದು ಸುಧಾರಣೆಗಳನ್ನು ತರುವ ಮೂಲಕ ಕುವೆಂಪುರವರು ತಮ್ಮ ಸಂವಾದಗಳಲ್ಲಿ ವೈಚಾರಿಕ ಗೊಂದಲಗಳು ಇರಬಾರದೆಂಬ ಕಾರಣಕ್ಕಾಗಿ ಅವರು ಸ್ವತಃ ಸಂವೇದನೆಯ ನಿರೂಪಕನ ನೆಲೆಯಲ್ಲಿಯೇ ನಿಂತುಕೊಳ್ಳುವ ಮುಖಾಂತರವಾಗಿ ಮೌಢ್ಯತೆಗೆ ಸಂಬಂಧಿಸಿದಂತಹ ವಿಚಾರಗಳನ್ನು ಮತ್ತು ಅವುಗಳಿಗೆ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿರುವುದು ಕಂಡುಬಂದಿದೆ.

ಕಾನೂರಿನ ಮನೆತನವು ಮಲೆಗಳಲ್ಲಿ ಮದುಮಗಳಿಗಿಂತಲೂ ಭಿನ್ನವಾಗಿ ಇರುವಂತಹುದನ್ನು ಕಾಣಬಹುದು ಈ ಕಾದಂಬರಿಯಲ್ಲಿ ಮಾತ್ರ ಪ್ರತಿಯೊಂದು ಹೊಸ ಘಟನೆಯೂ ಜೀವನಾನುಭವದ ಸಂಕೀರ್ಣತೆಯನ್ನು, ವೈಚಿತ್ರ್ಯವನ್ನು, ವಿವಿಧತೆಯನ್ನು ಹೆಚ್ಚು ಮಾಡುವುದನ್ನು ಗ್ರಹಿಸಬಹುದು. ಈ ಕಾದಂಬರಿಯಲ್ಲಿ ಬದುಕಿನ ಕ್ರಮ ಎಂಬುದು ಬಹಳ ವಿಸ್ತಾರವಾದದ್ದಾಗಿರುತ್ತದೆ ಹಾಗೂ 'ಕಾನೂರು ಹೆಗ್ಗಡಿತಿ'ಯಲ್ಲಿ ಪ್ರಾದೇಶಿಕ ವಿವರಗಳು ವ್ಯಕ್ತಿಗಳಿಗೆ, ಘಟನೆಗಳಿಗೆ, ನಿರ್ದಿಷ್ಟವಾದಂತಹ ಹಿನ್ನಲೆಯನ್ನು ಹಾಗೂ ಅನಿವಾರ್ಯತೆಯನ್ನು ತಂದುಕೊಟ್ಟಿರುವುದನ್ನು ಗ್ರಹಿಸಬಹುದು.

"ಕಾನೂರು ಹೆಗ್ಗಡಿತಿ"ಯಲ್ಲಿ ಮುಖ್ಯವಾಗಿ ಕಾನೂರಿನಲ್ಲಿ ಚಂದ್ರಯ್ಯ ಗೌಡರ ಮನೆತನದಲ್ಲಿ ಕಂಡು ಬರುವ ದೈವ-ದುರ್ದೈವಗಳ ಬಗೆಗೆ ಹಾಗೂ ಬಹಳ ಪ್ರಮುಖವಾಗಿ

ಹೂವಯ್ಯ ಮತ್ತು ಸೀತೆಯರ ಪ್ರಣಯದ ಅನೇಕ ರೀತಿಯ ವಿವಿಧ ಮುಖಗಳನ್ನು ಕಾಣಬಹುದು ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯು 'ಕಾನೂರು ಹೆಗ್ಗಡಿತಿ' ಕಾದಂಬರಿಗಿಂತಲೂ ತೀರ ಭಿನ್ನವಾಗಿದೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಅನುಭವದ ಸಂಘಟನೆಗೆ ಐಕ್ಯವನ್ನು ತಂದು ಕೊಡುವುದನ್ನು ನಾವು ಗುರುತಿಸಬೇಕಾಗುತ್ತದೆ. ನವ ನಾಗರೀಕತೆಯ ಗಾಳಿ ಬೀಸದೇ ಇರುವ ಈ ಕಾದಂಬರಿಯ ಜೀವನದಲ್ಲಿ ಮಹತ್ತರವಾದ ಅಂಶವೆಂದರೆ ವ್ಯಕ್ತಿ-ವ್ಯಕ್ತಿಗಳ ನಡುವಿನ ವಾಸ್ತವತಾವಾದದ ಸಂಬಂಧ ವ್ಯಕ್ತಿಗಳ ಜೀವನ ಮತ್ತು ಬದುಕಿನ ಕ್ರಮವನ್ನು ಅವರವರ ಸಂಬಂಧಗಳಿಂದ ಸ್ಪಷ್ಟಪಡಿಸಿರುವುದು ಕಾದಂಬರಿಯ ವೈಶಿಷ್ಟವಾಗಿದೆ. ಡಾ॥ಕೀರ್ತಿನಾಥ ಕುರ್ತಕೋಟಿಯವರು ಹೇಳಿರುವ ಈ ಹೇಳಿಕೆಯನ್ನು ಸ್ಥಳೀಯತೆಗೆ ಸಂಬಂಧಿಸಿದಂತೆ ಎರಡೂ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

"ಹಳೆಮನೆ ಸುಬ್ಬಣ್ಣ ಹೆಗ್ಗಡೆಯವರ ಹಿರಿಯ ಮಗ ಈ ಕಾದಂಬರಿಯಲ್ಲಿ ಪ್ರತ್ಯಕ್ಷವಾಗಿ ಬರುವುದಿಲ್ಲ. ಪ್ರತ್ಯಕ್ಷವಾಗಿ ಕಾಣುವುದೆಂದರೆ ಅವನ ಹೆಣ ಮಾತ್ರ ಆದರೆ ರಂಗಮ್ಮ, ಸುಬ್ಬಣ್ಣ ಹೆಗ್ಗಡೆ,ಧರ್ಮು,ಮೊದಲಾದ ಸಮೀಪದ ಸಂಬಂಧಗಳು ಹೋಗಲಿ, ಕೋಣೂರು ಮುಕುಂದಯ್ಯ, ಬೆಟ್ಟಳ್ಳಿ ದೇವಯ್ಯ, ದೊಡ್ಡಣ್ಣ ಕಂಡರೆ ಅವನನ್ನು ಒಂದೇ ಒಂದು ಚಣದಲ್ಲಿ ಗುರ್ತು ಹಿಡಿಯಬಲ್ಲ ಕಾಫಿ ಅಂಗಡಿಯ ಅಣ್ಣಪ್ಪಯ್ಯ. ಇವರೆಲ್ಲರ ಸಂಬಂಧಗಳಿಂದ ತಿರುಪತಿಗೆ ಹೋಗಿ ತಿರುಗಿಬಾರದಿದ್ದ ದೊಡ್ಡಣ್ಣ ಹೆಗ್ಗಡೆ ಕ್ರಿಯಾಶೀಲವಾದ ಪಾತ್ರವಾಗಿಬಿಡುತ್ತಾನೆ. ಕೋಣೂರು ಮುಕುಂದಯ್ಯ ಮತ್ತು ಚಿನ್ನಮ್ಮ ಇವರ ಮದುವೆ ಸಲುವಾಗಿ ಮೊದಲಿನ ಎಷ್ಟು ಸಂಬಂಧಗಳು ಒಡೆದು ಹೊಸ ಸಂಬಂಧಗಳು ಕೂಡಿಕೊಳ್ಳುತ್ತವೆಂಬುದನ್ನು ನೆನೆದರೆ ಈ ಸಂಬಂಧಗಳ ಮಹತ್ವ ಗೊತ್ತಾಗುತ್ತದೆ. ಕೋಣೂರಿನ ಮನೆಪಾಲಾಗಿ ಮುಕುಂದಯ್ಯ ಹೂವಳ್ಳಿಯ ಮನೆಯಲ್ಲಿ ಬಂದಿರಬೇಕಾಗುವುದು ಈ ಘಟನೆಯ ಪರಿಣಾಮ ಮಾತ್ರ.ಇದರಿಂದಾಗಿ ಸಿಂಭಾವಿಯ ಸಂಬಂಧಗಳು ತಪ್ಪಿಹೋಗುತ್ತದೆ. ಆದರೆ ತಿಮ್ಮಪ್ಪನ ಮದುವೆ ಸಾಧ್ಯವಾಗುತ್ತದೆ. ಕಾದಂಬರಿಯ ಕೊನೆಯ ಭಾಗದಲ್ಲಿ ಹೆಚ್ಚು ವ್ಯಾಪಿಸಿರುವ ಈ ಸಂಗತಿಯಲ್ಲಿ ಮದುವೆಯ ಸಂಭ್ರಮದ ವರ್ಣನೆ ಇರದೇ ಮುಕುಂದಯ್ಯನ ಸಂಬಂಧಗಳ ಪುನರ್ಯೋಜನೆಯ ವರ್ಣನೆಯಿರುವುದು ಗಮನಾರ್ಹವಾಗಿದೆ ಮೇಲು ವರ್ಗದವರ ಜೀವನದಲ್ಲಿ ಮುಕುಂದಯ್ಯ ಚಿನ್ನಮ್ಮಳ ದಾಂಪತ್ಯ, ಬದುಕಿನ ಪೂರ್ಣಫಲವಾಗಿದ್ದರೆ ಕೆಳವರ್ಗದವರ ಜೀವನದಲ್ಲಿ ನಾಯಿಗುತ್ತಿ ಮತ್ತು ತಿಮ್ಮಿಯರ ದಾಂಪತ್ಯಕ್ಕೂ ಅದೇ ಸ್ಥಾನವಿದೆ. ಇಡೀ ಕಾದಂಬರಿಯ ಘಟನೆಗಳು ಈ ಕೊನೆಯನ್ನು

ಮುಟ್ಟಲೆಂದೇ ದುಡಿಯುವಂತೆ ತೋರುತ್ತದೆ. ಈ ದೃಷ್ಟಿಯಿಂದ ಇವರನ್ನು ಪ್ರಮುಖ-ಪಾತ್ರಗಳೆಂದು ಬೇಕಾದರೆ ಕರೆಯಬಹುದು. ಇವರ ನಡುವೆ ಐತ-ಪೀಂಚಲು ಅವರ ಸಫಲ-ದಾಂಪತ್ಯ ಮೇಲೆ ಹೇಳಿರುವ ಜೋಡಿಗಳಿಗೆ ಜೀವನದಲ್ಲಿ ನಂಬಿಕೆಯನ್ನು ಹುಟ್ಟಿಸುವ ದಾಂಪತ್ಯವಾಗಿದೆ".

"ಮಲೆಗಳಲ್ಲಿ ಮದುಮಗಳು ಕಾದಂಬರಿಯ ಈ ಸಂಬಂಧಗಳು ಆಧುನಿಕ ಕಾದಂಬರಿಯಲ್ಲಿ ಅಂತರ್ಮುಖತೆ ಮಾಡುವ ಕೆಲಸವನ್ನು ಯಶಸ್ವಿಯಾಗಿ, ನಿರ್ವಹಿಸುತ್ತಿದೆ. ಮುಕುಂದಯ್ಯ, ಐತ, ನಾಯಿಗುತ್ತಿ, ದೇವಯ್ಯ ಇವರಲ್ಲಿ ಯಾರೂ ಬುದ್ಧಿ ಜೀವಿಗಳಲ್ಲ. ಅನಂತಯ್ಯನವರಲ್ಲಿ ಬುದ್ಧಿವಂತಿಕೆ ಇರುವದಾದರೂ ಅದೆಲ್ಲ ಸಹಜ ಪ್ರವೃತ್ತಿಯಿಂದ ಬಂದದ್ದು. ಅದೂ ಅಲ್ಲದೆ ಅವರು ಎಷ್ಟೆಂದರೂ ಹೊರಗಿನಿಂದ ಬಂದು ನೆಲೆಸಿದವರು. ಆದ್ದರಿಂದ ಈ ಕಾದಂಬರಿಯ ವ್ಯಕ್ತಿಗಳ ಬದುಕಿನಲ್ಲಿ ಆಳವಾದ ಕೆಲಸವೆಂದರೆ ಅನುಭವವನ್ನು ಬೆಲೆಗಟ್ಟುವದು, ಒಳಿತು-ಕೆಡಕುಗಳನ್ನು ವಿಂಗಡಿಸುವದು, ಸತ್ಯವನ್ನು ನಿರ್ದೇಶಿಸಿ ಪರಿಚಯಿಸುವದು. ಈ ಕೆಲಸವೆಲ್ಲ ಈ ಕಾದಂಬರಿಯಲ್ಲಿ ವ್ಯಕ್ತಿ-ವ್ಯಕ್ತಿಗಳ ನಡುವಿನ ನೈಜವಾದ ಸಂಬಂಧ ಮತ್ತು ಅದರ ಬದಲಾವಣೆಗಳಿಂದ ಸೂಚಿತವಾಗುತ್ತದೆ".[10]

ಒಟ್ಟಾರೆಯಾಗಿ ಹೇಳುವುದಾದರೆ ಕುವೆಂಪುರವರು 'ಕಾನೂರು ಹೆಗ್ಗಡಿತಿಯಲ್ಲಿ ಹೂವಯ್ಯನು ತನ್ನದೇ ಆದಂತಹ ಸುರಕ್ಷಿತವಾದಂತಹ ಜ್ಞಾನದ ಮುಖಾಂತರವಾಗಿ, ಕಾದಂಬರಿಯಲ್ಲಿ ಪರಕೀಯನಾಗಿ ಜೀವನದ ಹೊರಗೆ ನಿಂತುಕೊಳ್ಳುವ ಮೂಲಕ ಅದರ ಜೀವಂತ ತನವನ್ನು ಅಲ್ಲಗೆಳೆಯುವುದನ್ನು ನಾವು ಗ್ರಹಿಸಬಹುದಾಗಿದೆ. ಕೃತಿಯ ಸೃಜನಶೀಲತೆಗೆ ವಿರುದ್ಧವಾಗಿ ಹೂವಯ್ಯನ ಒಂದು ಬೌದ್ಧಿಕ ಪಾತ್ರವನ್ನು ಚಿತ್ರಿಸಿರುವುದನ್ನು ನಾವು ಗುರ್ತಿಸಬಹುದು. ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಸೃಷ್ಟಿಯಾಗಿರುವಂತಹ ಮುಕುಂದಯ್ಯನು ಕಾದಂಬರಿಯ ಜೀವನದ ಒಳಗೆ ನಿಂತು ಅಲ್ಲಿಯ ಸ್ಥಳೀಯ ಜೀವನ ಕ್ರಮವನ್ನು ಅಳವಡಿಸಿಕೊಳ್ಳುವ ಮೂಲಕ ತಾನು ಬಯಸಿದಂತೆ ಜೀವನವನ್ನು ಸಾಗಿಸುವಂತಹುದನ್ನು ನಾವು ಗ್ರಹಿಸಬಹುದಾಗಿದೆ. ವಸಾಹತುಪ್ರಜ್ಞೆಯಿಂದಾಗಿ ಮಲೆನಾಡಿನಲ್ಲಿ ಒಳಗೊಂಡಿದ್ದಂತಹ ಸ್ಥಳೀಯರ ಬದುಕಿನ ಕ್ರಮದ ಮೇಲೆ ಸ್ವಲ್ಪ ಭಿನ್ನವಾದ ಪರಿಣಾಮವನ್ನು ಬೀರುವ ಮುಖಾಂತರವಾಗಿ ಭಾರತೀಯ ಸಂಸ್ಕೃತಿಯ ಮೇಲೆ ಪಾಶ್ಚಾತ್ಯರ ಪ್ರಭಾವವೂ ಬೀರಿದಂತಹ ಪರಿಣಾಮಗಳನ್ನು ಆ ಪರಿಣಾಮಗಳ ಪ್ರಭಾವದಿಂದಾಗಿ,

ಆದಂತಹ ಮಾರ್ಪಾಟುಗಳನ್ನು ಮತ್ತು ಸ್ಥಳೀಯತೆ ಹಾಗೂ ವಸಾಹತುವನ್ನು ಮುಖಾಮುಖಿ ಮಾಡುವ ಮೂಲಕ ಮಲೆನಾಡಿನ ಜನರ ಬದುಕಿನ ಕ್ರಮವೂ ಹೇಗೆ ನವನಾಗರೀಕತೆಯ ಕಡೆಗೆ ಹೆಜ್ಜೆಯನ್ನು ಹಾಕಲು ಮುನ್ನಡೆಯಿತು ಎಂಬುದನ್ನು ನಾವು ಕಾದಂಬರಿಯಡಿಯಲ್ಲಿ ಗ್ರಹಿಸಬಹುದು. ಬ್ರಿಟಿಷರು ನಮ್ಮ ಸಾಂಸ್ಕೃತಿಕ ಜೀವನದ ಮೇಲೆ ಬೀರಿರುವ ಸರ್ವವ್ಯಾಪಿ ಪ್ರಭಾವದ ಪರಿಣಾಮಗಳನ್ನು ನಾವು ತಿಳಿಯಬಹುದಾಗಿದೆ.

ಇನ್ನು ಶಿವರಾಮಕಾರಂತರ ವಿಚಾರ 'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ಬಹಳ ಪ್ರಮುಖವಾಗಿ ಪ್ರಾಚೀನ ಕಾಲದ ಸಾಂಪ್ರದಾಯಿಕವಾದ ವಿಚಾರಗಳು ಮತ್ತು ಸಮಾಜದಲ್ಲಿ ಕಂಡು ಬರುವಂತಹ ಪುರೋಹಿತಶಾಹಿಯ ವ್ಯವಸ್ಥೆಯೊಂದಿಗೆ ಹೋರಾಟವನ್ನು ಮಾಡುವ ಮುಖಾಂತರ ವಸಾಹತುಶಾಹಿಯ ಪ್ರಭಾವದಿಂದಾಗಿ ಆಧುನಿಕತೆಯ ಮೂಲಕ ಬಂದ ಶಿಕ್ಷಣವು ತನ್ನದೇ ಆದಂತಹ ಜೀವನ ಕ್ರಮದ ಆಯ್ಕೆಯನ್ನು ಮಾಡಿಕೊಂಡಿರುವುದನ್ನು ನಾವು ಕಾಣಬಹುದಾಗಿದೆ. ಈ ಕಾದಂಬರಿಯೂ ಈ ಮೊದಲೇ ಹೇಳಿದಂತೆ ಮೂರು ತಲೆಮಾರುಗಳಿಗೆ ಸಂಬಂಧಿಸಿದಂತೆ ಕಥೆಯನ್ನು ನಿರೂಪಿಸುತ್ತದೆ. ಕಾಲಕ್ಕೆ ತಕ್ಕಂತೆ ವಿಭಿನ್ನವಾದ ಮಾರ್ಪಾಟುಗಳ ಹಿನ್ನೆಲೆಯಲ್ಲಿ ಮೂರು ತಲೆಮಾರುಗಳ ಕಥೆಗಳು ಸಾಮಾಜಿಕ ಬದಲಾವಣೆಯ ಹಿನ್ನಲೆಯಲ್ಲಿ ಸೂಚಿತವಾಗುತ್ತದೆ.

ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಬರುವ ಕೋದಂಡರಾಮ ಐತಾಳರ ಮಗನಾದ ರಾಮ ಐತಾಳರು ಹಿಂದಿನ ಕಾಲದಲ್ಲಿ ಸ್ಥಳೀಯತೆಗೆ ಸಂಬಂಧಿಸಿದಂತೆ ಹಳೆಯ ಕಾಲದ ಎಲ್ಲಾ ರೀತಿಯಾದಂತಹ ಗುಣಗಳನ್ನು ಮತ್ತು ಅವಗುಣಗಳನ್ನು ಒಳಗೊಂಡಿರುವುದನ್ನು ನಾವು ಗ್ರಹಿಸಬಹುದಾಗಿದೆ. ಆ ಸಮಯದಲ್ಲಿ ರಾಮ ಐತಾಳರ ಕುಟುಂಬ ನಿರ್ವಹಣೆಯೂ ಅವರ(ರಾಮ ಐತಾಳ) ಪೌರೋಹಿತ್ಯದಿಂದ ಹಾಗೂ ಅದರ ಜೊತೆಗೆ ಸ್ವಲ್ಪ ತಮ್ಮ ಭೂಮಿಯಲ್ಲಿ, ಕೃಷಿಕಾರ್ಯವನ್ನು ನಡೆಸುವ ಮುಖಾಂತರ ಸಾಗುತ್ತಿತ್ತು. ಅದೇ ಸಂದರ್ಭದಲ್ಲಿ ನವನಾಗರೀಕತೆ ಎಂಬುದು ಈ ಪೌರೋಹಿತ್ಯದಲ್ಲಿ ಅಂದರೆ ವಸಾಹತುಶಾಹಿಯ ಆಗಮನದಿಂದಾಗಿ ಅಲ್ಲಿ ಬಿರುಗಾಳಿಯೆಂಬುದು ಉಂಟಾಯಿತು. ಅದು ಹೇಗೆಂದರೆ ಅಲ್ಲಿನ ಪರಿಸರಕ್ಕೆ ಆಗಮಿಸಿದಂತಹ ಹೋಟೆಲ್ ಆಗಿರಬಹುದು, ಶಿಕ್ಷಣದ ವ್ಯವಸ್ಥೆಗಳಾಗಿರಬಹುದು ಇವುಗಳಿಂದ ಅಲ್ಲಿ ಬಹಳಷ್ಟು ಮಾರ್ಪಾಟುಗಳಾಗಿರುವುದನ್ನು ನಾವು ಗಮನಿಸಬಹುದಾಗಿದೆ.

ರಾಮ ಐತಾಳರ ಮಗನಾದ ಲಚ್ಚನನ್ನು ಶಿವರಾಮಕಾರಂತರು ಎಲ್ಲಾ ರೀತಿಯಾದ ದುಷ್ಟತನಗಳಿಂದ ಕೂಡಿರುವಂತೆ ಚಿತ್ರಿಸಿರುತ್ತಾರೆ. ಇಲ್ಲಿ ಬಹಳ ಪ್ರಮುಖವಾಗಿ ನಾವು ಗಮನಿಸಬೇಕಾದಂತಹ ಅಂಶವೇನೆಂದರೆ ಲಚ್ಚನ ಮಗನಾದ ರಾಮು ಸಹ ಇಂಗ್ಲೀಷ್ ವಿದ್ಯಾಭ್ಯಾಸವನ್ನು ಪಡೆಯುತ್ತಾನೆ. ಆದರೆ ಲಚ್ಚನಲ್ಲಿ ಯಾವುದೇ ರೀತಿಯಾದ ಸನ್ನಡತೆಗೆ ಸಂಬಂಧಿಸಿದ ಮಾನವೀಯ ಗುಣಗಳನ್ನು ಕಾಣುವುದು ಅಸಾಧ್ಯ ಎಂಬ ರೀತಿಯಲ್ಲಿ ಶಿವರಾಮಕಾರಂತರು ಲಚ್ಚನನ್ನು ಚಿತ್ರಿಸಿರುತ್ತಾರೆ. ಆದರೆ ಮುಂದುವರಿದಂತೆ ರಾಮ ಐತಾಳನ ಜಿಪುಣತನ ಲಚ್ಚನ ದುಷ್ಟತನ ಮತ್ತು ರಾಮುವಿನ ಒಳ್ಳೆತನವನ್ನು ಬಹಳ ಉತ್ತಮವಾಗಿ ಮೂರು ತಲೆಮಾರುಗಳಿಗೆ ಸಂಬಂಧಿಸಿದಂತೆ ಚಿತ್ರಿಸಿರುತ್ತಾರೆ. ಕುಟುಂಬದ ಒಟ್ಟಾರೆ ದುರಂತಕ್ಕೆ ಕಾರಣವಾಗಿ ಲಚ್ಚನು ಕಾಣಿಸಿಕೊಳ್ಳುತ್ತಾನೆ. ಲಚ್ಚನು ಯಾವ ರೀತಿಯಲ್ಲಿ ತನ್ನ ಜೀವನ ಪರ್ಯಂತ ಕುಟುಂಬದ ನಿರ್ವಹಣೆಯ ಕಡೆಗೆ ಒಂದಿಷ್ಟು ಗಮನವನ್ನು ಕೊಡುವುದಿಲ್ಲ ಹಾಗೆಯೇ ರಾಮ ಐತಾಳರು ತನ್ನ ಮಗನಾದ ಲಚ್ಚನ ಎಲ್ಲಾ ರೀತಿಯಾದ ಗುಣಲಕ್ಷಣಗಳನ್ನು ತಿಳಿದುಕೊಂಡಿದ್ದಂತಹ ಅವರು ತಮ್ಮ ಹೆಸರಿನಲ್ಲಿದ್ದಂತಹ ಎಲ್ಲಾ ರೀತಿಯಾದ ಆಸ್ತಿಗಳನ್ನು ತನ್ನ ಸೊಸೆಯಾದ ನಾಗವೇಣಿಯ ಹೆಸರಿಗೆ ಬದಲಿಸಿರುತ್ತಾರೆ. ಅಂತಹ ಸಂದರ್ಭದಲ್ಲಿ ಲಚ್ಚನು ತನ್ನ ಇಡೀ ಜೀವನವನ್ನು ವಿದ್ಯಾಭ್ಯಾಸ ಮಾಡುತ್ತೇನೆ ಎಂಬುವುದಾಗಿ ಹೇಳುವ ಮುಖಾಂತರವಾಗಿ ತನ್ನ ಜೀವನವನ್ನು ದುಷ್ಟತನಗಳಿಂದಾಗಿ ತೊಳಲಾಡುವಂತೆ, ಇಡೀ ಕುಟುಂಬದ ದುರಂತಕ್ಕೆ ಲಚ್ಚನು ಕಾರಣನಾಗುತ್ತಾನೆ ಎನ್ನುವುದನ್ನು ಈ ಮೂಲಕ ಗ್ರಹಿಸಬಹುದು. ಅಂದರೆ ತನ್ನ ಪತ್ನಿಯಾದಂತಹ ನಾಗವೇಣಿಯ ಹೆಸರಿನಲ್ಲಿದ್ದ ಆಸ್ತಿಗಳನ್ನು ಬಹಳ ಬುದ್ಧಿವಂತಿಕೆಯಿಂದಾಗಿ ತನ್ನ ಹೆಸರಿಗೆ ಮಾಡಿಸಿಕೊಳ್ಳುವುದು ಇಲ್ಲಿ ವ್ಯಕ್ತವಾಗುತ್ತದೆ.

"ಸಾಲಿಗ್ರಾಮದ ಹಬ್ಬ ಕಳೆಯಲು ಒಂದು ದಿನ ಬಲು ಚಮತ್ಕಾರವಾಗಿ ನಾಗವೇಣಿಯನ್ನು ಉಡುಪಿಗೆ ಕರೆದೊಯ್ಯುವೆನೆಂದು ಹೇಳಿ, ಕರೆದೊಯ್ದು ಲಚ್ಚನು ಬ್ರಹ್ಮಾವರಕ್ಕೆ ಹೋಗಿ, ಅವಳ ಹೆಸರಿಗಿದ್ದ ಆಸ್ತಿಗಳನ್ನು ತನ್ನ ಹೆಸರಿಗೆ ಮಾಡಿಸಿಕೊಂಡು ಬಂದನು ನಾಗವೇಣಿ ಈ ಸುದ್ದಿಯನ್ನು ಯಾರಿಗೂ ತಿಳಿಸಲಿಲ್ಲ. ಲಚ್ಚನು ಆ ವಿಷಯವಾಗಿ ಯಾರಲ್ಲೂ ಬಾಯಿ ಬಿಡಲಿಲ್ಲ. ಎಲ್ಲರ ಮನಸ್ಸಿನಲ್ಲೂ, ಕೃಷ್ಣ ದೇವರ ದರ್ಶನಕ್ಕೆ ಹೋಗಿ ಬಂದಿರಬೇಕು ಎಂದು ಅನಿಸಿತು". [11]

ಈ ರೀತಿಯಾಗಿ ಮೋಸದಿಂದ ತನ್ನ ಪತ್ನಿಯಾದ ನಾಗವೇಣಿಯ ಹೆಸರಿನಲ್ಲಿದ್ದಂತಹ ಎಲ್ಲಾ ರೀತಿಯಾದ ಆಸ್ತಿಗಳನ್ನು ತನ್ನ ಕೈವಶ ಮಾಡಿಕೊಳ್ಳುತ್ತಾನೆ. ಒಂದು ಕಡೆ ಲಚ್ಚ ಮನೆಯ ದುರಂತಕ್ಕೆ ಕಾರಣವಾದರೆ, ಮತ್ತೊಂದು ಕಡೆಯಲ್ಲಿ ಪುರೋಹಿತ ವ್ಯವಸ್ಥೆಯೊಂದಿಗೆ ಯಾವುದೇ ರೀತಿಯಾದಂತಹ ತಾತ್ವಿಕ ಸಂಘರ್ಷವಿಟ್ಟುಕೊಳ್ಳದಿದ್ದರೂ ರಾಮನು ಒಬ್ಬ ಆಧುನಿಕತೆಯನ್ನು ಪ್ರತಿನಿಧಿಸುವಂತಹ ಪಾತ್ರವಾಗಿ ಕಾಣಿಸಿಕೊಳ್ಳತ್ತಾನೆ. ಅಂದರೆ ರಾಮ ವಸಾಹತುಶಾಹಿಯ ಅಂದರೆ ಇಂಗ್ಲೀಷ್ ಶಿಕ್ಷಣವನ್ನು ಪಡೆದುಕೊಳ್ಳುವ ಮುಖೇನ ಜೀವನದ ಯಶಸ್ಸಿಗೆ ಕಾರಣಕರ್ತನಾಗುತ್ತಾನೆ.

ಕಾರಂತರು ಕೋಡಿಯ ಗ್ರಾಮಕ್ಕೆ ಹೇಗೆ ವಸಾಹತುಶಾಹಿಯೂ ತನ್ನ ಪ್ರವೇಶವನ್ನು ನೀಡಿತ್ತು ಎಂಬುವುದನ್ನು ಈ ರೀತಿಯಾಗಿ ಚಿತ್ರಿಸಿರುತ್ತಾರೆ. ಅಲ್ಲಿ ಕಂಡು ಬರುವಂತಹ ರಾಮ ಐತಾಳರಾಗಿರಬಹುದು, ಶೀನಮಯ್ಯರು ಆಗಿರಬಹುದು ಅವರ ಬದುಕಿನ ಕ್ರಮವನ್ನು ಚಿತ್ರಿಸಿರುತ್ತಾರೆ. ಅಂದರೆ ಒಬ್ಬರಿಗಿಂತ ಮತ್ತೊಬ್ಬರು ಯಾವ ರೀತಿಯಲ್ಲಿ ಭಿನ್ನವಾಗಿ ಆಸ್ತಿಗಳನ್ನು ಗಳಿಸಲು, ಮುಂದಾಗುತ್ತಾರೆ ಜೊತೆಗೆ ಅಲ್ಲಿನ ಸ್ಥಳೀಯತೆಗೆ ಸಂಬಂಧಿಸಿದಂತೆ ಶೀನಮಯ್ಯರು ತಮ್ಮ ಗಂಡು ಮಕ್ಕಳು ಹೋಟೆಲ್ ನಡೆಸುವುದರ ಮೂಲಕ ಸಂಪಾದಿಸಿದ ಹಣವನ್ನು ತಂದೆಗೆ ಕಳುಹಿಸಿ ಕೊಡುತ್ತಿದ್ದರು ಅದೇ ಹಣವನ್ನು ಬಳಸಿಕೊಂಡಂತಹ ಶೀನಮಯ್ಯನವರು ಕೋಡಿಯ ಗ್ರಾಮದಲ್ಲಿರುವಂತಹ ಕೆಲವೊಂದು ಜಮೀನುಗಳನ್ನು ತಮ್ಮ ದಾಗಿಸಿಕೊಳ್ಳಲು ರಾಮ ಐತಾಳನಿಗಿಂತ ಹೆಚ್ಚುವರಿ ಭೂಮಿಯನ್ನು ತಾನು ಪಡೆಯುವಂತಹ ಹೆಬ್ಬಯಕೆ ಇವೆಲ್ಲವನ್ನು ಕಾಣಬಹುದಾಗಿದೆ. ಇದರ ಜೊತೆಗೆ ಮುಖ್ಯವಾಗಿ ಅಲ್ಲಿನ ಜನರು ಹಳೆಯ ಪರಂಪರೆಯನ್ನು ಬೆನ್ನಲ್ಲಿ ಕಟ್ಟಿಕೊಂಡು ಜೀವನವನ್ನು ಸಾಗಿಸುತ್ತಿದ್ದರು. ತದನಂತರದಲ್ಲಿ ಸ್ವಲ್ಪ ನಿಧಾನವಾಗಿ ತಮ್ಮ ಪರಂಪರಾಗತ ವೃತ್ತಿಯನ್ನು ಬಿಟ್ಟು ಬದುಕುವಂತಹ ಹೊಸ ಮಾರ್ಗಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಕಾರಂತರು ತಮ್ಮ ಕಾದಂಬರಿಯಲ್ಲಿ ಮಾಡಿರುತ್ತಾರೆ. ಅಂದರೆ ಸ್ಥಳೀಯವಾಗಿ ಮೊದಲಿಗೆ ಅಲ್ಲಿನ ಪರಿಸರಕ್ಕೆ ತಮ್ಮನ್ನು ತಾವು ಒಗ್ಗಿಸಿಕೊಂಡವರಾಗಿ ಕಾಣಿಸಿಕೊಂಡರೂ ತದನಂತರಲ್ಲಿ ನಗರ ಪ್ರದೇಶಗಳಾದಂತಹ ಕುಂದಾಪುರ, ಉಡುಪಿ, ಮಂಗಳೂರು, ಮೈಸೂರು, ಬೆಂಗಳೂರು, ಮುಂಬಯಿಗಳಲ್ಲಿ ತಮ್ಮ ಪರಂಪರಾಗತವಾಗಿ ನಡೆಸಿಕೊಂಡು ಬಂದಂತಹ ವೃತ್ತಿಯನ್ನು ಕೈ ಬಿಡುವ ಮುಖಾಂತರವಾಗಿ ಹೊಸ ಮಾರ್ಗಗಳನ್ನು ಹುಡುಕಿಕೊಳ್ಳುವ ಮೂಲಕ ತಮ್ಮ ಜೀವನದಲ್ಲಿ ಯಶಸ್ಸನ್ನು ಕಂಡು ಕೊಂಡಿರುವಂತಹ ಚಿತ್ರಣಗಳನ್ನು ಸಹ ನಾವು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ

ನೋಡಬಹುದಾಗಿದೆ. ಒಂದು ಕಾಲಕ್ಕೆ ಪೌರೋಹಿತ್ಯಕ್ಕೆ ಸಂಬಂಧಿಸಿದಂತಹ ಸಂಸ್ಕೃತ ಭಾಷೆ ಶ್ರೇಷ್ಠ ವಿದ್ಯೆಯೆಂಬುದನ್ನು ನಂಬಿದ್ದಂತಹ ಒಂದು ಜನಾಂಗದವರು ವಸಾಹತುಶಾಹಿಯ ಪ್ರಭಾವಕ್ಕೆ ಒಳಗಾಗಿ ನೂತನವಾದಂತಹ ಹುದ್ದೆಗಳನ್ನು ಸಂಪಾದಿಸಿಕೊಳ್ಳುವ ಮುಖಾಂತರ ಆಧುನೀಕರಣದ ಒಂದು ಪ್ರಕ್ರಿಯೆ ಎಂಬುವುದು ಈ ಮೊದಲೇ ಕೋಡಿ ಗ್ರಾಮವನ್ನು ಪ್ರವೇಶಿಸುವುದನ್ನು ಚಿತ್ರಿಸಿರುತ್ತಾರೆ.

'ಮರಳಿಮಣ್ಣಿಗೆ' ಕಾದಂಬರಿಗೆ ಸಂಬಂಧಿಸಿದಂತೆ ಕಾರಂತರು ಹೇಗೆ ಅಲ್ಲಿನ ಸ್ಥಳೀಯರ ಬದುಕನ್ನು ಚಿತ್ರಿಸಿರುತ್ತಾರೆ ಎಂಬುದನ್ನು ನಾವು ಡಾ. ಐ.ಜೆ.ಮ್ಯಾಗೇರಿಯವರ 'ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿ' ಎಂಬ ಕೃತಿಯಲ್ಲಿ ಈ ಕೆಳಕಂಡಂತೆ ಗುರ್ತಿಸಿರುತ್ತಾರೆ.

"ಪರಂಪರಾಗತ ಸಮಾಜವೊಂದು ಭಯ, ಆಸೆಗಳಿಂದ ಆಧುನಿಕತೆಯತ್ತ, ನೋಡುವ ಪ್ರಕ್ರಿಯೆ ಇಲ್ಲಿ ಆರಂಭಗೊಂಡಿದೆ. ಬದಲಾದ ಪರಿಸ್ಥಿತಿಯಲ್ಲಿ ಆಧುನಿಕತೆಗೆ ಮೊದಲ ಸ್ಥಾನ, ಪರಂಪರೆಗೆ ಎರಡನೆಯ ಸ್ಥಾನ. ತಮ್ಮ ಜಾತಿ, ವರ್ಗ, ವ್ಯವಸ್ಥೆ ಬಗ್ಗೆ ಐತಾಳರಿಗೆ ಇನ್ನು ಒಣಜಂಬ ಇದ್ದರೂ ಮಗನ ಇಂಗ್ಲೀಷ್ ವಿದ್ಯಾಭ್ಯಾಸದ ಮೋಹವೇ ಅವರ ಹೊಸ ಅರಿವನ್ನು ಆಶೋತ್ತರಗಳನ್ನು ಧ್ವನಿಸುತ್ತದೆ. ಆಧುನೀಕರಣದ ಪ್ರಕ್ರಿಯೆಯಲ್ಲಿ ಸ್ವಪ್ರತಿಷ್ಠೆಯನ್ನು ಸಾಧ್ಯವಾದಷ್ಟು ಉಳಿಸಿಕೊಂಡು ಹೇಗೆ ಪಾಲ್ಗೊಳ್ಳಬೇಕೆಂಬುದೇ ಅವರ ಜೀವನದ ಹೊಸ ಸವಾಲಾಗಿತ್ತು. ಹಾಗಾಗಿಯೇ ರಾಮ ಐತಾಳರ ದ್ವಂದ್ವಗಳು ಸಂಪ್ರದಾಯನಿಷ್ಠ ಸಮಾಜದ ದ್ವಂದ್ವಗಳೂ ಹೌದು. ವಾಣಿಜ್ಯ, ವ್ಯಾಪಾರ, ಸಂಪರ್ಕದ ಹೊಸ ಸಾಧ್ಯತೆಗಳಿಂದಾಗಿ ಹಳ್ಳಿಗಳಿಂದ ನಗರಗಳಿಗೆ ವಲಸೆ ಪ್ರಾರಂಭವಾಗಿ ನಗರಗಳಲ್ಲಿ ಕಾಣಿಸಿಕೊಂಡ ಈ ಪ್ರಕ್ರಿಯೆ ನಿಧನಿಧಾನವಾಗಿ ಗ್ರಾಮೀಣ ಭಾರತವನ್ನು ಒಲಿಸಿಕೊಳ್ಳುತ್ತಿತ್ತು".

"ರಾಮ ಐತಾಳರ ಮೊಮ್ಮಗ ಅಂದರೆ ಲಚ್ಚನ ಮಗ ರಾಮನ ಕಾಲಕ್ಕೆ ಆಧುನೀಕರಣದ ಪ್ರಕ್ರಿಯೆ ಆರಂಭದ ಗೊಂದಲಗಳನ್ನು ಸ್ವಲ್ಪ ಮಟ್ಟಿಗೆ ನಿವಾರಿಸಿಕೊಂಡು ಒಂದು ನಿರ್ಣಾಯಕ ಘಟ್ಟದತ್ತ ಮುಂದುವರೆಯುತ್ತದೆ. ಆಧುನೀಕರಣದ ಜೀವನದ ಸಾಧ್ಯತೆಗಳನ್ನು ವಿಸ್ತರಿಸುತ್ತಿದ್ದಂತೆಯೇ ಪರಂಪರೆಯ ಅವನತಿ ಚುರುಕುಗೊಂಡಂತೆಯೇ.

ಹೊಸ ಸಮಸ್ಯೆಗಳೂ ಉದ್ಭವಿಸುತ್ತವೆ. ರಾಮನ ನಿರುದ್ಯೋಗ ಇಂಥ ಒಂದು ಸಮಸ್ಯೆ, ಇಂಥ ಪರಿಸ್ಥಿತಿಯಲ್ಲಿ ಅವನು ಐತಾಳರಂತೆ ಜೀವನವನ್ನು ಎದುರಿಸಲಾರ. ಪಾರೋತಿ, ಸರಸೋತಿಯರ ನಿಷ್ಠ ದುಡಿಮೆ ರಾಮನಿಂದ ಸಾಧ್ಯವಾಗದು. ಆದರೆ ಆಧುನಿಕ ವಿದ್ಯಾಭ್ಯಾಸದ ಅನೇಕ ಇತ್ಯಾತ್ಮಕ ಪರಿಣಾಮಗಳನ್ನು ರಾಮನ ವ್ಯಕ್ತಿತ್ವದಲ್ಲಿ ಕಾಣಬಹುದು. ರಾಷ್ಟ್ರೀಯ ಪ್ರಜ್ಞೆ ಇಂಥ ಒಂದು ಹೊಸ ಗುಣ".[12]

ಹಳೆಯ ಪದ್ಧತಿಗೆ ಸಂಬಂಧಿಸಿದಂತೆ ಅಲ್ಲಿನ ಸ್ಥಳೀಯರು ಹೇಗೆ ಸಾಂಪ್ರದಾಯಕ ವಿಚಾರಗಳನ್ನು ಕೈಬಿಡುವ ಮೂಲಕ ನೂತನವಾಗಿ ಆಧುನೀಕತೆಗೆ ಹೇಗೆ ತಮ್ಮನ್ನು ಒಗ್ಗಿಸಿಕೊಂಡಿರುತ್ತಾರೆ ಎಂಬುದು ಸೂಚಿತವಾಗಿದೆ.

ಕಾರಂತರು ಮೂರು ತಲೆಮಾರಿಗೆ ಸಂಬಂಧಿಸಿದಂತೆ ಒಂದೊಂದು ವಿಚಾರವನ್ನು ಅಂದರೆ ಒಬ್ಬೊಬ್ಬ ವ್ಯಕ್ತಿಯ ಬದುಕಿನ ಚಿತ್ರಣವನ್ನು ಹೇಗೆ ಒಬ್ಬರಿಗಿಂತ ಮತ್ತೊಬ್ಬರು ಭಿನ್ನ ಎಂಬುದನ್ನು ರಾಮ ಐತಾಳರ ಬದುಕಿನ ಕ್ರಮವೂ ಅವರ ಮಗನಾದ ಲಚ್ಚನ ಬದುಕಿನ ಕ್ರಮವೂ, ಹಾಗೆಯೇ ಲಚ್ಚನ ಮಗನಾದ ರಾಮುವಿನ ಬದುಕಿನ ಕ್ರಮವೂ ಭಿನ್ನವಾಗಿದೆ ಎಂಬುದನ್ನು ತೌಲನಿಕವಾಗಿ ಚಿತ್ರಿಸುತ್ತಾರೆ. ಅಂತೆಯೇ ಪಾರೋತಿಯ ಬದುಕಿನ ಕ್ರಮವೂ, ಸರಸೋತಿಯ ಬದುಕಿನ ಕ್ರಮವೂ ಹಾಗೂ ನಾಗವೇಣಿಯ ಬದುಕಿನ ಕ್ರಮವೂ ಒಂದೊಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಭಿನ್ನವಾಗಿದೆ ಎಂಬುದನ್ನು ಗುರ್ತಿಸಬಹುದಾಗಿದೆ. ಅಂದರೆ ಗ್ರಾಮೀಣ ಬದುಕು ಎಂಬುದು ಹೇಗೆ ನಿಧಾನವಾಗಿ ನಗರದ ಜೀವನ ಕ್ರಮಕ್ಕೆ ಆಕರ್ಷಣೆಗೊಳ್ಳುತ್ತಿದೆ ಎಂಬುವುದನ್ನು ಗ್ರಹಿಸಬಹುದಾಗಿದೆ. ಅಂತಹ ನಗರದ ಬದುಕಿನಿಂದಾಗಿ ಆಗುವಂತಹ ದುರಂತವನ್ನು ನಾವು ಗಮನಿಸಬಹುದಾಗಿದೆ. ಈ ವಿಚಾರಕ್ಕೆ ಸಂಬಂಧಿಸಿದಂತೆ ಡಾ. ಕರೀಗೌಡ ಬೀಚನಹಳ್ಳಿಯವರ ಸಂಕಥನದಲ್ಲಿ ಕಾರಂತರ ಈ ವಿಚಾರಗಳನ್ನು ಮನಗಾಣಬಹುದಾಗಿದೆ.

"ಶಿವರಾಮ ಕಾರಂತರ ಕಾದಂಬರಿಗಳು ಒಂದು ಶತಮಾನದ ಅಭಿವ್ಯಕ್ತಿಗೆ ಒಳಪಡುವ ಮಹತ್ವದ ಸಾಂಸ್ಕೃತಿಕ ದಾಖಲೆಗಳಾಗಿವೆ ಗ್ರಾಮೀಣ ಬದುಕು ನಗರದ ಆಕರ್ಷಣೆಯ ಕಡೆಗೆ ಒಳಗಾಗುವುದು ಮತ್ತು ಅಂತಹ ಆಕರ್ಷಣೆಗಳಿಂದ ಬದುಕು ದುರಂತವಾಗುವ ಬಗೆಯನ್ನು

ಕಾರಂತರ ಕಾದಂಬರಿಗಳು ವ್ಯಕ್ತಿ ಮತ್ತು ಸಮುದಾಯದ ನೆಲೆಯಲ್ಲಿ ಶೋಧಿಸುತ್ತವೆ. ಪರಂಪರೆ ಮತ್ತು ಆಧುನಿಕತೆಯ ನಡುವೆ ನಡೆಯುವ ಗೊಂದಲವನ್ನು ಮತ್ತು ವ್ಯಕ್ತಿ ಪರಿಸರಕ್ಕೆ ಬದ್ಧವಾಗಿ ಬದುಕಲು ನಿಲ್ಲುವ ಬಗೆಯನ್ನು ಇವರ ಕಾದಂಬರಿಗಳು ಚಿತ್ರಿಸುತ್ತವೆ. ಈ ಆಧುನಿಕ ಶತಮಾನದ ಭಾರತದ ಚರಿತ್ರೆ ಅತ್ಯಂತ ಸಂಕೀರ್ಣವಾದುದು. ಪಾಶ್ಚಾತ್ಯ ಹಾಗೂ ಪೌರ್ವಾತ್ಯ ಮೌಲ್ಯಗಳ ಸಂಘರ್ಷ ಈ ಶತಮಾನದ ಪ್ರಧಾನ ವಿಚಾರಧಾರೆ. ಈ ಮಾದರಿಯ ಸಂಘರ್ಷಗಳು ಸಂವೇದನಾಶೀಲರಾದ ಲೇಖಕರನ್ನು ಗಾಢವಾಗಿ ಆವರಿಸಿಕೊಂಡಿವೆ ಮತ್ತು ಕಾಡಿವೆ. ಅಂತಹ ಸಂವೇದನೆ ಈ ಶತಮಾನದ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಸಂದರ್ಭದಲ್ಲಿ ತೆಗೆದುಕೊಂಡ ಬಗೆಗಳು ಹಲವು. ಸೃಷ್ಟಿಶೀಲ ಬರಹಗಾರರು ಈ ಶತಮಾನದಲ್ಲಿ ಎದುರಿಸಿದ ರಾಜಕೀಯ ಹಾಗೂ ಸಾಂಸ್ಕೃತಿಕ ನೆಲೆಗಳು ವೈವಿಧ್ಯಮಯವಾಗಿದೆ."[13]

ಕಾರಂತರು ಹೇಳುವ ಪ್ರಕಾರ ಗ್ರಾಮೀಣ ಜನರು ಆಧುನಿಕತೆಗೆ ಎಷ್ಟೇ ಮಾರುಹೋದರೂ ಅದರಿಂದ ಅವನತಿ ತಪ್ಪಿದ್ದಲ್ಲ. ಆದ ಕಾರಣದಿಂದಾಗಿ ಮರಳಿ ಎಂದರೇ ಪುನಃ ತನ್ನ ಮಣ್ಣಿಗೆ ಬರುವಂತೆ ಕರೆ ನೀಡಿರುವುದನ್ನು ನಾವು ಈ ಕಾದಂಬರಿಯಲ್ಲಿ ರಾಮು ತನ್ನ ಅಜ್ಜನ ಆಸ್ತಿಯನ್ನು ಪಡೆಯುವ ಮುಖೇನ 'ಮರಳಿ ಮಣ್ಣಿಗೆ' ಬಂದು ತನ್ನ ಬದುಕನ್ನು ನಿರ್ವಹಿಸುವುದನ್ನು ಪ್ರಸಂಗದಲ್ಲಿ ಕಾಣುತ್ತೇವೆ.

ಕಾರಂತರು ಕಾದಂಬರಿಯಲ್ಲಿ ಸ್ಥಳೀಯತೆಗೆ ಸಂಬಂಧಿಸಿದಂತೆ ಅಲ್ಲಿನ ಜನ ಸಮೂಹವು ತಮ್ಮದೇ ಆದ ಅಂದರೆ ಹಿಂದಿನಿಂದ ನಡೆದುಕೊಂಡು ಬಂದಂತಹ ಎಲ್ಲಾ ಸಂಪ್ರದಾಯಕ ವಿಚಾರಗಳಿಗೆ ಅನ್ವಯವಾಗಿ ಜೀವನ ಕ್ರಮವೂ ಸಾಗುತ್ತಿದ್ದುದು ಎಲ್ಲರ ಗಮನ ಸೆಳೆಯುವ ಅಂಶವಾಗಿದೆ. ಆದರೆ ಅದೇ ಸಂದರ್ಭದಲ್ಲಿ ವಸಾಹತುಶಾಹಿ ಆಳ್ವಿಕೆಯ ಫಲವಾಗಿ ಮೂಡಿ ಬಂದಂತಹ ಆಧುನಿಕ ಇಂಗ್ಲೀಷ್ ಶಿಕ್ಷಣವು ಅದೇ ವಸಾಹತುಶಾಹಿಯ ಆಳ್ವಿಕೆಯನ್ನು ಮಾಡಿರುವುದನ್ನು ಮೂರನೇಯ ತಲೆಮಾರಿನ ಅನ್ವಯದಲ್ಲಿ ತಿಳಿಯಬಹುದಾದರೂ ಜಗತ್ತಿನ ಆಧುನೀಕರಣದ ಪ್ರಕ್ರಿಯೆಯಲ್ಲಿ ಒಡಮೂಡಿ ಬರುವಂತಹ ಒಂದು ಅತ್ಯಂತ ಕುತೂಹಲಕಾರಿಯಾದ ಅಂಶವಾಗಿ ಇದನ್ನು ಗ್ರಹಿಸಬಹುದಾಗಿದೆ. ಅಂದರೆ ಒಂದು ಕಡೆ ಲಚ್ಚ ಹಾಗೂ ಮತ್ತೊಂದು ಕಡೆ ಲಚ್ಚನ ಮಗ ರಾಮು ಇವರಿಬ್ಬರೂ ಕೂಡ ಆಧುನಿಕತೆಯನ್ನು ಸ್ವೀಕರಿಸುವ ಮುಖೇನ ನವನಾಗರೀಕತೆಯ ಕಡೆಗೆ ಹೆಜ್ಜೆಯನ್ನು ಹಾಕುತ್ತಿದ್ದ ಅಂಶವೂ ಎಲ್ಲರ

ಗಮನ ಸೆಳೆಯುವಂಥದ್ದಾಗಿದೆ. ಆದರೆ ಲಚ್ಚ ಇಂಗ್ಲೀಷ್ ಶಿಕ್ಷಣವನ್ನು ಪಡೆಯುವನಾಗಿ, ಕಂಡು ಬಂದರೂ ಸಹ ಅವನಲ್ಲಿ ಸನ್ನಡತೆಯ ಚಿತ್ರಣವೂ ಬಹಳ ವಿರಳವಾಗಿರುವುದನ್ನು ಗಮನಿಸಬಹುದು. ಆದರೆ ನಾವಿಲ್ಲಿ ಬಹಳ ಮುಖ್ಯವಾಗಿ ಗ್ರಹಿಸಬಹುದಾದ ಅಂಶವೆಂದರೆ ನವನಾಗರೀಕತೆಯ ಮುನ್ನಡೆಯ ಪಥದಲ್ಲಿ ಸಾಗುತ್ತಿರುವಂತಹ ತಂದೆ ಮತ್ತು ಮಗನ ಸಂಬಂಧವೂ ಹೇಗೆ ಸಂಪೂರ್ಣವಾಗಿ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ಲಚ್ಚನು ಇಡೀ ಕುಟುಂಬದ ದುರಂತಕ್ಕೆ ಕಾರಣಕರ್ತನಾದರೆ, ಆತನ ಮಗನಾದ ರಾಮುವೂ ಹೇಗೆ ಅವನತಿಯ ಅಂಚಿನಲ್ಲಿರುವಂತಹ ಮಟ್ಟಕ್ಕೆ ಕೊಂಡುಯ್ಯುವ ಮುಖೇನ ಅಲ್ಲಿ ಎಲ್ಲರ ಪ್ರೀತಿ ಪಾತ್ರನಾಗಿ ಕಾಣಿಸಿಕೊಳ್ಳುತ್ತಾನೆ. ಎಂಬುದು ಈ ಸನ್ನಿವೇಶದಲ್ಲಿ ಕಂಡುಬರುತ್ತದೆ.

ಕಾರಂತರು ಮುಖ್ಯವಾಗಿ ಈ ಕಾದಂಬರಿಯಲ್ಲಿ ಆಧುನಿಕ ಶಿಕ್ಷಣದ ಮೂಲಕ ದೊರಕಿದ ಜ್ಞಾನದಿಂದಾಗಿ ಸ್ವತಃ ಅರಿವನ್ನು ಮೂಡಿಸಿಕೊಳ್ಳುವ ಮುಖೇನ ತಮ್ಮನ್ನು ಆತ್ಮ ವಿಮರ್ಶೆಗೆ ಒಳಪಡಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆಯುವಂತೆ ಒಮ್ಮೆ ಮೂರನೇ ತಲೆಮಾರಿಗೆ ಸಂಬಂಧಿಸಿದ ನಾಗವೇಣಿ ಹಾಗೂ ರಾಮು ಇವರನ್ನು ಚಿತ್ರಿಸಲಾಗಿರುತ್ತದೆ. ಒಮ್ಮೆ ದುರಂತಕ್ಕೆ ಒಳಗಾದಂತಹ ನಾಗವೇಣಿಯೂ ಆಧುನಿಕ ಶಿಕ್ಷಣದ ಮುಖಾಂತರವಾಗಿಯೇ ತನ್ನ ಬದುಕನ್ನು ನಿರ್ವಹಿಸುತ್ತಾಳೆ ಎಂಬುದು ಇಲ್ಲಿ ವ್ಯಕ್ತವಾಗುತ್ತದೆ.

ಕನ್ನಡ ಕಾದಂಬರಿ ಪರಂಪರೆಯಲ್ಲಿ ಕಾಣಿಸಿಕೊಳ್ಳುವ ಶಿವರಾಮ ಕಾರಂತರು ತಮ್ಮ ಆಳವಾದಂತಹ ವೈಚಾರಿಕತೆ ನೆಲೆಯಿಂದಾಗಿ ಗ್ರಾಮೀಣ ಸಂಸ್ಕೃತಿಯ ಪರವಾಗಿರುವಂತಹ ಅಂಶಗಳನ್ನು ಹೇಳಿರುವಂತಹುದನ್ನು ನಾವು ಗ್ರಹಿಸಬಹುದಾಗಿದೆ. ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿರುವಂತಹ ಮಹಿಳೆಯ ಕಷ್ಟಗಳನ್ನು ಮತ್ತು ಸುಖಗಳನ್ನು ಪರಿಚಯಿಸುವುದರ ಮುಖಾಂತರವಾಗಿ ಅಲ್ಲಿನ ಮಹಿಳೆಯರ ಬದುಕಿನ ಮೌಲ್ಯಗಳ ವೈಭವೀಕರಣ ಮಾಡಿರುವುದನ್ನು ಸಹ ಗಮನಿಸಬಹುದು. ಈ ಕಾದಂಬರಿಯಲ್ಲಿ ಮುಖ್ಯವಾಗಿ ನಾವು ಸ್ತ್ರೀ ಪಾತ್ರಗಳಾದ ಪಾರೋತಿ, ಸರಸೋತಿ, ನಾಗವೇಣಿ ಇವೆರೆಲ್ಲರಲ್ಲೂ ಕೂಡ ದುಡಿಮೆ ಒಂದು ಮೌಲ್ಯವಾಗಿ ಕಾಣಿಸಿಕೊಳ್ಳುತ್ತದೆ. ತಮ್ಮ ಜೀವನ ಕ್ರಮದಲ್ಲಿ ಕೆಲಸ-ಕಾರ್ಯಗಳನ್ನು ಮಾಡಲು ಹಿಂಜರಿಯುವಂತಹ ಪುರುಷ ಪಾತ್ರಗಳಿಗೆ ಹೋಲಿಕೆ ಮಾಡಿದರೆ ಕೆಲವು ಸ್ತ್ರೀ ಪಾತ್ರಗಳು ಕಠಿಣವಾದಂತಹ ದುಡಿಮೆಯ ಮುಖಾಂತರವಾಗಿ ಯಶಸ್ವಿಯನ್ನು ಪಡೆದಿರುವುದನ್ನು ನಾವು ಕಾರಂತರ ಈ ಕಾದಂಬರಿಯಲ್ಲಿ ನೋಡಬಹುದಾಗಿದೆ.

'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ಕಂಡುಬರುವಂತೆ ಪುರುಷ ಪ್ರಾಧಾನ್ಯವಾದ ಆ ಸಮಾಜದಡಿಯಲ್ಲಿ ಹೆಣ್ಣು ಮಕ್ಕಳ ಜೀವನವು ಹೇಗೆ ತನ್ನ ತಾಳ್ಮೆಯಿಂದಾಗಿ ಅಲ್ಲಿನ ಪರಿಸರಕ್ಕೆ ತನ್ನನ್ನು ತಾನು ಒಗ್ಗಿಸಿಕೊಂಡು ಸಾಗಿಸುತ್ತಿತ್ತು ಎನ್ನುವುದು ಮುಖ್ಯವಾಗುತ್ತದೆ. ರಾಮ ಐತಾಳನ ಪತ್ನಿಯಾಗಿ ಕಾಣಿಸಿಕೊಳ್ಳುವಂತಹ ಪಾರೋತಿಯನ್ನು ನಾವಿಲ್ಲಿ ನೆನಪಿಗೆ ತಂದುಕೊಳ್ಳಬಹುದಾಗಿದೆ. ಆಕೆಯು ತಾನು ಬಂಜೆ ಎಂಬುವುದಾಗಿ ತಿಳಿದು ಕೊರಗುತ್ತಾ ಒಂದು ಮಗುವನು ದತ್ತು ತೆಗೆದುಕೊಳ್ಳುವಂತೆ ತನ್ನ ಪತಿಯಾದ ರಾಮ ಐತಾಳರಿಗೆ ಹೇಳಬೇಕೆಂದುಕೊಂಡರೂ ಪತಿಗೆ ಕೊನೆಗೂ ಹೇಳಲು ಸಾಧ್ಯವಾಗದೆಯೇ ಹೆದರಿಕೆಯಿಂದ ವಿಷಯವನ್ನು ತನ್ನ ಮನಸ್ಸಿನಲ್ಲಿಯೇ ಇಟ್ಟುಕೊಳ್ಳುತ್ತಾಳೆ. ಇದರ ಪರಿಣಾಮವಾಗಿ ರಾಮ ಐತಾಳರು ತನ್ನ ಪತ್ನಿಯಾದ ಪಾರೋತಿಗೆ ಯಾವುದೇ ರೀತಿಯಾದಂತಹ ವಿಷಯವನ್ನು ಹೇಳದೆಯೇ ಮರುಮದುವೆಯನ್ನು ಮಾಡಿಕೊಂಡು ಹೊಸ ಮದುಮಗಳಾಗಿ ಸತ್ಯಭಾಮೆಯನ್ನು ಕರೆತಂದರು. ಅಂತಹ ಸಮಯದಲ್ಲಿಯೂ ಕೂಡ ಪಾರೋತಿಯು ಯಾವುದೇ ರೀತಿಯಾದಂತಹ ಪ್ರತಿರೋಧವನ್ನು ವ್ಯಕ್ತಪಡಿಸದೇ ಇರುವುದರಿಂದ ಅವಳ ಸ್ಥಿತಿ ಗತಿ- ಮನೋಭಾವದ ಪ್ರತೀಕವಾಗಿದೆ. ನಿಜವಾಗಿಯೂ ಇಲ್ಲಿ ಹೆಣ್ಣು ಮಗಳು ಯಾವ ರೀತಿಯಾಗಿ ತನ್ನ ಬದುಕಿಗೆ ತಾನೇ ಒಂದು ರೀತಿಯಾದಂತಹ ಸಮಾಧಾನವನ್ನು ತಂದುಕೊಳ್ಳುವ ಮೂಲಕ ಅಲ್ಲಿನ ಸ್ಥಳೀಯತೆಯನ್ನು ಜೀವನ ಕ್ರಮಕ್ಕೆ ಒಗ್ಗಿಸಿಕೊಂಡಿದ್ದಾಳೆಂಬುದನ್ನು ಕಾಣಬಹುದಾಗಿದೆ.

ಪಾರೋತಿಯೂ ಜೀವನದುದ್ದಕ್ಕೂ ಕಹಿಯನ್ನೇ ಕಾಣುತ್ತಾಳೆ. ಇಲ್ಲಿ ಬಹಳ ಮುಖ್ಯವಾಗಿ ಕಾರಂತರು ಸತ್ಯ ಒಂದನ್ನು ಹೇಳಲು ಮುಂದಾಗುತ್ತಾರೆ, ಅದೇನೆಂದರೆ ಒಬ್ಬ ಹೆಣ್ಣು ಮಗಳಿನ ಜೀವನ ಸಾಫಲ್ಯವಾಗುವುದು ಅವಳ ಜೀವನದ ಸಂಗಾತಿಯಾಗಿ ಬರುವಂತಹ ವ್ಯಕ್ತಿಯ ಮೇಲೆ ಆಧರಿಸುತ್ತದೆ. ಸ್ಪಷ್ಟವಾಗಿ ಹೇಳುವುದಾದರೆ ಇಲ್ಲಿನ ಸ್ತ್ರೀಯರು ತಾವು ನಂಬಿದ ಮೌಲ್ಯಗಳನ್ನು ಎಷ್ಟೇ ಪ್ರಾಮಾಣಿಕವಾಗಿ ಬಾಳಿದರೂ ಅವರ ಜೀವನದ ಸಫಲತೆ ಅವರನ್ನು ಮದುವೆಯಾದವರ ಸಾರ್ಥಕತೆಯ ಮೇಲೆಯೇ ನಿಂತಿದೆ. ಪಾರೋತಿ, ಸರಸೋತಿ ಅಥವಾ ನಾಗವೇಣಿಯಾಗಿರಬಹುದು ಅವರ ಜೊತೆಗೆ ಕಾಣಿಸಿಕೊಳ್ಳುವ ಸತ್ಯಭಾಮೆಯಾಗಿರಬಹುದು ಇವರೆಲ್ಲರೂ ತಮ್ಮ ಜೀವನದುದಕ್ಕೂ ದುಃಖದ ಸನ್ನಿವೇಶಗಳನ್ನು ಬಹಳಷ್ಟು ಹತ್ತಿರದಿಂದ ನೋಡಿದವರಾಗಿ ಕಾರಂತರು ಇವರೆಲ್ಲರನ್ನು ಚಿತ್ರಿಸಿರುತ್ತಾರೆ. ಒಂದು ಸಮಾಜದಡಿಯಲ್ಲಿ ಇರುವಂತಹ ಕುರುಡು ಸಂಪ್ರದಾಯಗಳನ್ನು ಎಲ್ಲಾ ಹೆಣ್ಣುಮಗಳು

ಒಪ್ಪಿಕೊಳ್ಳುವವರಾಗಿಯೇ ಕಾಣಿಸಿಕೊಂಡಂತೆಯೆ ಮರು ಪ್ರಶ್ನೆ ಮಾಡುವಂತಹುದನ್ನೂ ಸಹ ನಾವಿಲ್ಲಿ ನೋಡಬಹುದಾಗಿದೆ.

ಕಾರಂತರು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಮುಖ್ಯವಾಗಿ ತಾಯ್ತನದ ಅಭಿವ್ಯಕ್ತಿಯನ್ನು ಪಾರೋತಿ ಪಡೆಯಲಾರದೆ ಹೋಗುತ್ತಾಳೆ. ರಾಮೈತಾಳರು ಮನೆಗೆ ಇನ್ನೊಂದು ಹೆಣ್ಣನ್ನು ತರುವ ವೇಳೆಯಲ್ಲಿ ತನ್ನ ಪತ್ನಿಯಾದ ಪಾರೋತಿಯಾಗಲಿ ಅಥವಾ ತಂಗಿಯಾದಂತಹ ಸರೋಸತಿಯಾಗಲಿ ಒಂದೇ ಒಂದು ಮಾತನ್ನು ಹೇಳದೇ ಎಲ್ಲ ವ್ಯವಸ್ಥೆಯನ್ನು ಮಾಡುವ ಮುಖಾಂತರವಾಗಿ ಮದುಮಗನನ್ನು ಹೊಸ ಹೆಂಡತಿಯನ್ನು ಸ್ವಾಗತಿಸುತ್ತಾರೆ, ಅಂತೆಯೇ ಅಲ್ಲಿನ ಸಮಾಜವೂ ಕೂಡ ಇದನ್ನು ಸಹಜವಾಗಿ ಸ್ವೀಕರಿಸುವುದು ಇದು ಸ್ಥಳೀಯ ಆಚಾರ- ವಿಚಾರಗಳಿಗೆ ಸಂಬಂಧಿಸಿದುದೇ ಆಗಿರುತ್ತದೆ. ಸ್ವತಃ ಪಾರೋತಿಯು ಯಾವುದೇ ರೀತಿಯಾದ ವಿರೋಧ, ಕೋಪ, ಆತಂಕ, ದುಃಖಗಳನ್ನು ತೀಕ್ಷ್ಣವಾಗಿ ತೋರ್ಪಡಿಸುವುದಿಲ್ಲ ಎಂಬುದನ್ನು ಗುರ್ತಿಸಬೇಕು. ಕಾರಂತರು ಪ್ರಮುಖವಾಗಿ ಗಂಡು ಮತ್ತು ಹೆಣ್ಣುಗಳ ಸಂಬಂಧವೂ ಉತ್ತಮವಾಗಿರಬೇಕೆಂದು ಮದುವೆಯ ಸಂದರ್ಭದಲ್ಲಿ ಎಲ್ಲಾ ರೀತಿಯಾದಂತಹ ಹಿರಿಯರು-ಕಿರಿಯರು ಹಾರ್ಧಿಕವಾಗಿರಬೇಕೆಂದು ಹಾರೈಸುತ್ತಾರೆ ಎಂಬುದೊಂದು ಸಹಜವಾದಂತಹ ಸಂಗತಿಯೇ ಸರಿ. ಆದರೆ ಗಂಡಿನ ಸ್ವಾರ್ಥವೆಂಬುದು ಹೇಗಿರುತ್ತದೆ ಎಂಬುದನ್ನು ನಾವಿಲ್ಲಿ ಗ್ರಹಿಸಬಹುದಾಗಿದೆ. ಈ ಕಾದಂಬರಿಯಲ್ಲಿ ಸ್ತ್ರೀಯರು ಪುರುಷನಿಗೆ ಸಂಬಂಧಿಸಿದಂತೆ ಹಲವಾರು ರೀತಿಯಾದ ವಿಚಾರಗಳನ್ನು ಮೌನವಾಗಿಯೇ ಪ್ರತಿಭಟಿಸುತ್ತಾರೆ. ಲಚ್ಚನು ತನ್ನ ಹೆಂಡತಿಯಾದ ನಾಗವೇಣಿಯನ್ನು ಬಿಟ್ಟು ಹೋದಾಗಲೂ ಮೊದಲಿಗೆ ಬಹಳಷ್ಟು ದುಃಖದಿಂದ ನರಳಿದಂತಹ ನಾಗವೇಣಿ ಒಮ್ಮೆ ತನ್ನ ಜೀವನವನ್ನು ಕಳೆದು ಕೊಳ್ಳಲು ಸಹ ಮುಂದಾಗುತ್ತಾಳೆ. ಆದರೆ ಆಕೆ ನಿಧಾನವಾಗಿ ತನ್ನಷ್ಟಕ್ಕೆ ತಾನೇ ಧೃತಿಗೆಡದೆ ಧೈರ್ಯವನ್ನು ತಂದುಕೊಳ್ಳುವ ಮುಖೇನ ತಮ್ಮ ಜೀವನದಲ್ಲಿ ಕಂಡು ಬರುವ ಎಲ್ಲಾ ರೀತಿಯಾದ ಸಮಸ್ಯೆಗಳು ಎದುರಿಸುತ್ತಾಳೆ. ವಸಾಹತುಶಾಹಿಪ್ರಜ್ಞೆಯ ಅಳವಡಿಕೆಯಿಂದಾಗಿ ಇಂಗ್ಲೀಷ್ ಶಿಕ್ಷಣದ ಅರಿವು ಹೊಂದಿದ ಅವಳು ಪಾರ್ವತಿ ಸರಸೋತಿಯವರಿಗಿಂತಲೂ ಸ್ವಲ್ಪ ಭಿನ್ನವಾಗಿ ಕಾಣಿಸಿಕೊಳ್ಳುತ್ತಾಳೆ. ನಾಗವೇಣಿಯೂ ತನ್ನ ಜೀವನದಲ್ಲಿ ಕಂಡು ಬರುವಂತಹ ಎಲ್ಲಾ ರೀತಿಯಾದ ಸಮಸ್ಯೆಗಳೆಲ್ಲವನ್ನು ಎದುರಿಸುವ ಮುಖಾಂತರ ತನ್ನ ಮಗನಾದ ರಾಮುವಿನ ಮುಖಾಂತರವಾಗಿ ಸ್ವಲ್ಪ ಯಶಸ್ಸನ್ನು ಕಾಣುತ್ತಾಳೆ ಎಂಬುದನ್ನು ಈ ಕೆಳಗಿನ ಸಾಲುಗಳಿಂದ ಗ್ರಹಿಸಬಹುದಾಗಿದೆ.

“ ರಾಮನು ಹೋದ ಬಳಿಕ ನಾಗವೇಣಿಯು ತಮ್ಮ ಮನೆಯ ಸುಖ-ದುಃಖಗಳನ್ನು ಹೇಳಲು ಕುಳಿತಳು. ರಾಮನ ಮನೆಗೆ ಬಂದದ್ದು, ಗೋಡೆಯು ಕುಸಿದು ಬಿದ್ದು ತುಸು ಹಣ ಸಿಕ್ಕಿದುದು, ಅವನು ಬಂದಂದಿನಿಂದ ಸ್ವಂತ ಸಾಗುವಳಿ ಮಾಡುತ್ತಿರುವುದು, ರಾಮ ಕೋಡಿಯ ಖಾಸಗಿ ಶಾಲೆಯೊಂದರಲ್ಲಿ ಹತ್ತು ರೂಪಾಯಿಗಳ ವೇತನಕ್ಕೆ ದುಡಿಯುತ್ತಿರುವುದು. ಎಲ್ಲವನ್ನೂ ಸುಬ್ಬಿಗೆ ವಿವರಿಸಿದಳು. ಆದರೂ ‘ಕೆಲಸ ಕಾಯಂ ಅಲ್ಲ. ಟ್ರೇನಿಂಗೂ ಆಗಬೇಕು. ಅದನ್ನೆಲ್ಲ ಮಾಡುವ ಯೋಚನೆ ರಾಮನಿಗಿಲ್ಲ. ಈ ಮೂಲಗೇಣಿಯ ಜಾಗ ಅವರು ಕ್ರಯಕ್ಕೆ ಹಿಂದಕ್ಕೆಕೊಡಲು ಒಪ್ಪಿದರೆ ಮಾಸ್ತರಿಕೆ ನಡೆದಷ್ಟು ದಿನ ನಡೆಯಲಿ ಮುಂದೆ ಬಿಡುವ ಎಂದಿದ್ದಾನೆ’.

‘ಎಷ್ಟು ರೂಪಾಯಿ ಕೊಡಬೇಕಾದೀತೋ-ಅವರಿಗೆ?’

‘ಪಡುಮುನ್ನೂರಿನವರು ನಮ್ಮ ಗೋಳನ್ನು ಕೇಳಿ ಮನೆಯ ಸುತ್ತಲಿನ ಚೂರು ಮಾತ್ರ 1500ಕ್ಕೆ ಸಿಗುವ ಹಾಗೆ ಮಾಡುವ ಎಂದಿದ್ದಾರೆ. ಆದರೂ ಅಷ್ಟು ಹಣವೂ ಪೂರಾ ಇಲ್ಲ. ಈ ವರ್ಷ ಹೊಗೆಸೊಪ್ಪು ಬಹಳ ಚೆನ್ನಾಗಿ ಆಗಿದೆ. ದರ ಹೀಗೆಯೇ ಉಳಿದರೆ ಈ ವರ್ಷವೇ ಹೇಗಾದರೂ ಮಾಡಿ ಮರ್ಯಾದೆ ಉಳಿಸಿಕೊಳ್ಳಬಹುದು ನಾನು ಮಾವನ ಮಾತು ಮೀರಿದುದ್ದಕ್ಕೆ ತಿರುಗಿ ಆಸ್ತಿಯನ್ನು ಪಡೆದರೆ ಎಲ್ಲರಿಗೂ ಒಮ್ಮೆ ಪ್ರಾಯಶ್ಚಿತ್ತ ಆದ ಹಾಗೆ ಆಯಿತು. ನಾವೂ ಯಾರ ಹಂಗಿಲ್ಲದೆ ಇರಬಹುದು’.

ಸುಬ್ಬತ್ತೆಯು ತನ್ನ ಅಪ್ಪನ ಭೂಮಿಯು ತಿರುಗಿ ಕುಟುಂಬಕ್ಕೆ ಬಂದರೆ ದೇವರಿಕೆ ಹರಕೆ ಹೇಳುತ್ತೇನೆ ಎಂದುಕೊಂಡಳು.”[14]

ಪ್ರಮುಖವಾಗಿ ಗ್ರಹಿಸಬಹುದಾದ ಅಂಶವೆಂದರೆ ಇಲ್ಲಿ ಒಮ್ಮೆ ಕಳೆದುಕೊಂಡಂತಹ ಭೂಮಿಯನ್ನು ಪುನಃ ಪಡೆಯಲು ಯತ್ನಿಸುವುದು. ಒಂದು ತಲೆಮಾರಿನಲ್ಲಿ ರಾಮ ಐತಾಳರು ಪಡೆದಿದ್ದ ಆಸ್ತಿಯನ್ನು ಮತ್ತೊಂದು ತಲೆಮಾರಿನಲ್ಲಿ ಕಾಣಿಸಿಕೊಳ್ಳುವಂತಹ ಲಚ್ಚನು ಆಸ್ತಿಯನ್ನು ಮಾರಿಕೊಳ್ಳುವ ಮುಖಾಂತರ ಇಡೀ ಕುಟುಂಬದ ದುರಂತಕ್ಕೆ ಕಾರಣವಾಗಿ ಕಾಣಿಸಿಕೊಳ್ಳುತ್ತಾನೆ. ಆದರೆ ಮೂರನೇ ತಲೆಮಾರಿನಲ್ಲಿ ಕಾಣಿಸಿಕೊಳ್ಳುವಂತಹ ನಾಗವೇಣಿ ಹಾಗೂ ಆಕೆಯ ಮಗನಾದಂತಹ ರಾಮುವಿನ ಮುಖಾಂತರವಾಗಿ ಒಮ್ಮೆ

ಕಳೆದುಕೊಂಡಂತಹ ಆಸ್ತಿಯನ್ನು ಪುನಃ ಪಡೆದುಕೊಳ್ಳುವಂತಹುದನ್ನು ನಾವು ಇಲ್ಲಿ ಕಾಣಬಹುದಾಗಿದೆ. ನಾಗವೇಣಿ ಮತ್ತು ಆಕೆಯ ಮಗನಾದಂತಹ ರಾಮು ಇವರಿಬ್ಬರೂ ಕಷ್ಟಪಟ್ಟು ಪಡೆದಂತಹ ಕೃಷಿಯ ಮುಖೇನ ಅದರಲ್ಲಿಯೂ ಹೊಗೆ ಸೊಪ್ಪಿನ ಸಾಗುವಳಿಯ ಮುಖೇನ ಸ್ವಲ್ಪ ಹಣವನ್ನು ಸಂಪಾದಿಸಿದವರಾಗಿ ಕಾಣಿಸಿಕೊಳ್ಳುತ್ತಾರೆ. ಅದರಿಂದಾಗಿಯೇ ತಾವು ಮರು ಆನಂದವನ್ನು ಪಡೆಯಲು ಸಾಧ್ಯವಾಯಿತು ಎಂಬುದು ಸ್ಪಷ್ಟವಾಗುತ್ತದೆ.

"ಹಣ ದೊರೆತ ವಾರದೊಳಗಾಗಿ ರಾಮರಾಯ, ರಾಮ ಐತಾಳರ ಕುಟುಂಬದ ಆಸ್ತಿಯ ಚೂರೊಂದಕ್ಕೆ ತಿರುಗಿ ಹಕ್ಕುದಾರನಾದನು. ಆಸ್ತಿ ತಿರುಗಿ ತಮ್ಮ ಹೆಸರಿಗೆ 'ರಿಜಿಸ್ಟ್ರಿ'ಯಾದ ದಿನ ನಾಗವೇಣಿಯ ಮನದ ಉಕ್ಕು ಹೇಳತೀರದು. ಇಪ್ಪತ್ತು ವರ್ಷಗಳ ಹಿಂದೆ-ಲಚ್ಚನು ಅವಳನ್ನು ಉಡುಪಿಗೆ ಕರೆದುಕೊಂಡು ಹೋಗುವೆನೆಂದು ಹೇಳಿ ಬದಲು ಬ್ರಹ್ಮಾವರಕ್ಕೆ ಕರೆದೊಯ್ದು, ಅವಳ ಹೆಸರಿಗಿದ್ದ ಆಸ್ತಿಯನ್ನು ತನ್ನ ಹೆಸರಿಗೆ ಬರೆಯಿಸಿಕೊಂಡಿದ್ದ. ಅದಾದ ತಿಂಗಳೊಂದರಲ್ಲಿಯೇ ಆಸ್ತಿಯೇ ಕೈಬಿಟ್ಟು ಹೋಯಿತು. ನಾರಾಯಣ ಅಜ್ಜಯ್ಯನ ಬಲವಿಲ್ಲದೆ ಹೋಗಿದ್ದರೆ ಅದು ಮೂಲಗೇಣಿಗೂ ಸಿಗುತ್ತಿರಲಿಲ್ಲ. ತಿರುಗಿ ಆ ತಾವಿನಲ್ಲಿ ತಾವು ವಾಸವಾಗುವ ಆಸೆಯೂ ಉಳಿಯದಿರುತಿತ್ತು. ಈಗ ತಿರುಗಿ ಆ ಮಣ್ಣಿನ ಋಣ ತಮಗೇನೆ ದೊರೆಯಿತೆಂದು ಅವರು ಬಲವಾಗಿ ಹಿಗ್ಗಿದರು.

ರಾಮನಿಗೆ ಉತ್ಸಾಹ ತುಂಬಿರುವ ಗಳಿಗೆಯಲ್ಲೇ, ತಾನವನ ಮದುವೆಯ ಮಾತೆತ್ತಬೇಕೆಂದು ತಾಯಿ ಎಣಿಸಿದ್ದಳು. ಆ ಪ್ರಸ್ತಾಪಕ್ಕಾಗಿ ಇಂದು ನಾಳೆ ಎಂದು ಗಳಿಗೆ ಕಾಯುತ್ತಿದ್ದಳು. ಈಗ ಆಸ್ತಿಯೂ ಕೈಗೆ ಬಂದಿತು. ಬ್ಯಾರಿಗಳ ಸಾಟೆ ವ್ಯಾಪಾರದಿಂದಾಗಿ, ಅವರು ಯಾರಲ್ಲೂ ಸಾಲಕ್ಕೆ ಹೋಗದ ತೆರನಾಯಿತು."[15]

ಶಿವರಾಮಕಾರಂತರು ಅಂತಿಮವಾಗಿ ಮರಳಿಮಣ್ಣಿಗೆ ಕಾದಂಬರಿಯಲ್ಲಿ ಒಂದು ತಲೆಮಾರಿನಲ್ಲಿ ತಾವು ಕಳೆದುಕೊಂಡಿದ್ದಂತಹ ಸ್ಥಳೀಯತೆಗೆ ಸಂಬಂಧಿಸಿದ ತಮ್ಮ ಪರಿಸರದಲ್ಲೇ ಹುಡುಕುವ ಒಂದು ಭಾಗವನ್ನು ಅಂದರೆ ಆಸ್ತಿಯನ್ನು ಪುನಃ ವಸಾಹತುಶಾಹಿಯ ಪ್ರಜ್ಞೆಯಿಂದಾಗಿ ನವನಾಗರೀಕತೆಯ ಕಡೆಗೆ ಮುನ್ನಡೆಯನ್ನು ಸಾಗಿಸುವ ಮುಖೇನವಾಗಿ ಯಾವುದೇ ರೀತಿಯಾದಂತಹ ಎಷ್ಟೇ ಕಷ್ಟಗಳು ಎದುರಿಗೆ ಕಂಡು ಬಂದರೂ ಅದನ್ನು ಶಿಕ್ಷಣದ ಅರಿವಿನಿಂದ ಎದುರಿಸುವ ಮೂಲಕ ಒಮ್ಮೆ ತಾವು ಅನುಭವಿಸಿದಂತಹ ದುಃಖದಿಂದಾಗಿ

ಹೊರಬರುವ ಮುಖಾಂತರ ಈ ಮೊದಲೇ ಕಳೆದುಕೊಂಡಿದ್ದಂತಹ ಆಸ್ತಿಯನ್ನು ಪಡೆದುಕೊಳ್ಳವ ಮೂಲಕ ಮರಳಿ ತಮ್ಮ ಜೀವನದಲ್ಲಿ ಆನಂದ ಮತ್ತು ಸಂತೋಷಗಳನ್ನು ಅನುಭವಿಸುವಂತಾದ ಜನಾಂಗದ ಒಂದು ಚಿತ್ರಣವನ್ನು 'ಮರಳಿಮಣ್ಣಿಗೆ' ಮೂಲಕ ನೀಡುತ್ತಿದ್ದಾರೆಂದು ನಮಗೆ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಕಾಲದಿಂದ-ಕಾಲಕ್ಕೆ ಹೇಗೆ ಸಮಾಜ ಬದಲಾಗುತ್ತದೆಯೋ, ಅದೇ ರೀತಿಯಲ್ಲಿ ವ್ಯಕ್ತಿಗಳ ಜೀವನ ಚಕ್ರವೂ ಕೂಡ ಕಾಲದಿಂದ-ಕಾಲಕ್ಕೆ ಬದಲಾವಣೆಗೊಳ್ಳುವ ಮೂಲಕ ಒಂದು ಹೊಸ ಪ್ರಜ್ಞೆಯನ್ನು ಪಡೆದುಕೊಳ್ಳುತ್ತದೆ ಎಂಬುದು ಇಲ್ಲಿ ನಮ್ಮ ಅರಿವಿಗೆ ಬರುವ ವಿಚಾರವಾಗಿದೆ.

ಒಟ್ಟಾರೆಯಾಗಿ ಈ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಹಾಗೂ ಶಿವರಾಮಕಾರಂತರ 'ಮರಳಿಮಣ್ಣಿಗೆ' ಈ ಕಾದಂಬರಿಗಳಲ್ಲಿ ನಾವು ಬಹಳ ಪ್ರಮುಖವಾಗಿ ಗ್ರಹಿಸಬಹುದಾದಂತಹ ಅಂಶಗಳೆಂದರೆ ಭಾರತೀಯ ಪರಂಪರೆಯಲ್ಲಿ ಸನಾತನ ಕಾಲದಿಂದಲೂ ಬೆಳೆದು ಬಂದಂತಹ ಸಂಸ್ಕೃತಿ ಅಡಿಯಲ್ಲಿ ಹೇಗೆ (ಪಾಶ್ಚಾತ್ಯರ ಪ್ರಭಾವವೂ ಸೇರಿ) ವಸಾಹತುಶಾಹಿಯು ತನ್ನದೇ ಆದ ರೀತಿ ಪ್ರವೇಶವನ್ನು ಮಾಡುವ ಮುಖಾಂತರವಾಗಿ ಅಲ್ಲಿನ ಸ್ಥಳೀಯತೆಯ ಹಾಗೂ ಪರಿಸರದ ಮೇಲೆ ಹೇಗೆ ಬದಲಾವಣೆಗಳನ್ನುಂಟು ಮಾಡಿತು ಎನ್ನುವ ವಿಷಯವೇ ಸರಿಯಾಗಿದೆ.

ಕುವೆಂಪು ಮತ್ತು ಕಾರಂತರು ಗುರ್ತಿಸಿರುವಂತೆ ಬಹಳಷ್ಟು ಮಾರ್ಪಾಟುಗಳನ್ನು ನಮ್ಮ ಕನ್ನಡ ಪರಂಪರೆಯು ಕಂಡುಕೊಂಡಿದ್ದರೂ ಕೂಡ ತನ್ನದೇ ಆದಂತಹ ಕೆಲವೊಂದು ಅಂಶಗಳನ್ನು ಇಂದಿಗೂ ಅನುಕರಣೆ ಮಾಡುತ್ತಿರುವುದನ್ನು ಸಹ ನಾವಿಲ್ಲಿ ಗುರ್ತಿಸಬಹುದಾಗಿದೆ. ಅಂದರೆ ಎಷ್ಟೇ ಪಾಶ್ಚಾತ್ಯರ ಪ್ರಭಾವವೂ ನಮ್ಮ ಮೇಲೆ ಪರಿಣಾಮವನ್ನು ಬೀರಿದರೂ ನಮ್ಮದೇ ಆದಂತಹ ಕನ್ನಡ ಪರಂಪರೆಯನ್ನು ಅಲ್ಲಿನ ಕೆಲವೊಂದು ವಿಚಾರಣೆಗಳನ್ನು ನಿರಾಕರಿಸದೇ ಇರುವಂತಹುದು ಹರ್ಷದಾಯಕವಾದಂತಹ ಸಂಗತಿಯೆ ಸರಿ.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಮಲೆನಾಡಿನ ಜನರು ನವನಾಗರೀಕತೆಯ ಕಡೆಗೆ ಮುನ್ನಡೆಯನ್ನು ಸಾಗಿಸಿದರೂ ಕೂಡ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ

ಮುಕುಂದಯ್ಯನು ಅಲ್ಲಿನ ಪರಿಸರಕ್ಕೆ ತಕ್ಕಂತೆ ಅಂದರೆ ಅಲ್ಲಿನ ಸ್ಥಳೀಯತೆಗೆ ಸಂಬಂಧಿಸಿದಂತೆ ಯಾವುದೇ ರೀತಿಯಾದಂತಹ ಮರುಪ್ರಶ್ನೆಗಳನ್ನು ಕೇಳದೆ ಜೀವನವನ್ನು ಸಾಗಿಸುವ ಹಾಗೂ ಎಷ್ಟೇ ಸಣ್ಣ-ಪುಟ್ಟ, ಎಡರು-ತೊಡರುಗಳು ಕಂಡು ಬಂದರೂ ಅಂತಿಮವಾಗಿ ತಾನು ಬಯಿಸಿದಂತೆ ಚಿನ್ನಮ್ಮಳನು ಪಡೆದುಕೊಳ್ಳುವ ಮುಖೇನ ಮಲೆಗಳಲ್ಲಿ ಮದುಮಕ್ಕಳಾಗಿ ಮಿಂಚುತ್ತಾರೆ. ಆದರೆ ಅದೇ ಮಲೆನಾಡಿನ ಪರಿಸರಕ್ಕೆ ತನ್ನನ್ನು ತಾನು ಒಗ್ಗಿಸಿಕೊಳ್ಳದೇ ಪರಕೀಯನಾಗಿ ತಾನು ಪ್ರೀತಿಸಿದ ಸೀತೆಯನ್ನು ಕೊನೆಗೆ ಪಡೆಯಲು ಹೂವಯ್ಯನಿಗೆ ಅಸಾಧ್ಯವಾಗುತ್ತದೆ. ಇದಕ್ಕೆ ಕಾರಣವೇನೆಂದರೆ ಹೂವಯ್ಯ ಎಷ್ಟೇ ವಸಾಹತುಪ್ರಜ್ಞೆಯನ್ನು ಪಡೆದುಕೊಂಡಿದ್ದರೂ ಕೂಡ ಅದರ ಮೂಲಕವಾದರೂ ಸರಿ ಅಲ್ಲಿನ ಸ್ಥಳೀಯತೆಗೆ ತನ್ನನ್ನು ತಾನು ಒಗ್ಗಿಸಿಕೊಳ್ಳಲು ಹೋಗುವಲ್ಲಿ ಸೋತಿದ್ದು.

ಶಿವರಾಮಕಾರಂತರ ಮರಳಿಮಣ್ಣಿಗೆ ಕಾದಂಬರಿಯಲ್ಲಿ ನಾವು ಬಹಳ ಪ್ರಮುಖವಾಗಿ ಗ್ರಹಿಸಬಹುದಾದ ಅಂಶವೆಂದರೆ ಮೂರು ತಲೆಮಾರಿಗೆ ಸಂಬಂಧಿಸಿದಂತಹ ಕಥೆಯನ್ನು ಕೂಲಂಕುಷವಾಗಿ ಒಳಹೊಕ್ಕು ನೋಡಿದಾಗ ಜನರ ಜೀವನ ಕ್ರಮವು ಕಾಲದಿಂದ-ಕಾಲಕ್ಕೆ ಹೇಗೆ ಪರಿವರ್ತನೆಗೊಳ್ಳುತ್ತಾ ಹೋಗುತ್ತದೆ ಎಂಬುದು. ಕಾಲದ ಮಿತಿಯನ್ನು ನಾವು ಗಮನಿಸಿದಾಗ ಒಮ್ಮೆ ನಾವು ಏನನ್ನು ಆಕಸ್ಮಿಕವಾಗಿ ಕಳೆದುಕೊಳ್ಳುತ್ತೇವೆಯೋ ಅದನ್ನು ಪುನಃ ಪಡೆಯಲು ಯತ್ನಿಸಿದಾಗ ಅದಕ್ಕಾಗಿ ನಿರಂತರ ಪ್ರಯತ್ನವನ್ನು ಮಾಡಿದಾಗ ಖಂಡಿತವಾಗಿಯೂ ಅದನ್ನು ನಾವು ಪಡೆಯಬಹುದಾಗಿದೆ ಎಂಬುದುಇಲ್ಲಿ ವೇದ್ಯವಾದ ವಿಚಾರ.

**ಕೊನೆ ಟಿಪ್ಪಣಿಗಳು:**


1. ಡಾ॥ಐ.ಜೆ.ಮ್ಯಾಗೇರಿ: ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಪ್ರಥಮ ಮುದ್ರಣ 2008 ಪುಟ 07.
2. ಡಾ॥ರಾಜೇಂದ್ರ ಚೆನ್ನಿ: ದೇಶೀ ವಾದ ಸಾಹಿತ್ಯ ಪರಿಭಾಷಿಕ ಮಾಲೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ಎರಡನೇ ಮುದ್ರಣ 1999 ಪುಟ 59.
3. ಡಾ॥ ಡಿ.ಆರ್. ನಾಗರಾಜ್: ಅಮೃತ ಮತ್ತು ಗರುಡ (ವಿಮರ್ಶಾ ಲೇಖನಗಳ ಸಂಕಲನ),ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು 1990 ಪುಟ21 ,23.
4. ಕುವೆಂಪು: ಮಲೆಗಳಲ್ಲಿ ಮದುಮಗಳು,ಉದಯರವಿ ಪ್ರಕಾಶನ,ಮೈಸೂರು 1998 ಪುಟ 157–158.
5. ಕುವೆಂಪು: ಮಲೆಗಳಲ್ಲಿ ಮದುಮಗಳು,ಉದಯರವಿ ಪ್ರಕಾಶನ,ಮೈಸೂರು 1998 ಪುಟ 647–648.
6. ಡಾ॥ ಕೆ. ಸಿ. ಶಿವಾರೆಡ್ಡಿ: ಶತಮಾನದ ಹಾಡು–ಪಾಡು,ಅಧ್ಯಯನ ಮಂಡಲ, ಬೆಂಗಳೂರು. 2003 ಪುಟ113–114.
7. ಕುವೆಂಪು: ಕಾನೂರು ಹೆಗ್ಗಡತಿ,ಉದಯ ರವಿ ಪ್ರಕಾಶನ ಮೈಸೂರು,1997 ಪುಟ103–104.
8. ಕುವೆಂಪು: ವಿಚಾರ ಕ್ರಾಂತಿಗೆ ಆಹ್ವಾನ ಉದಯ ರವಿ ಪ್ರಕಾಶನ ಮೈಸೂರು,1998 ಪುಟ 59–60.
9. ಡಾ॥ ಕರೀಗೌಡ ಬೀಚನಹಳ್ಳಿ: ಸಂಕಥನ, ಎರಡನೇ ಮುದ್ರಣ 2010 ಪುಟ 158.
10. ಡಾ॥ ಕೀರ್ತಿನಾಥ ಕುರ್ತಕೋಟಿ: ಕಾದಂಬರಿ, ವಿಮರ್ಶೆಯ ವಿನಯ,ದ್ವಿತೀಯ ಆವೃತ್ತಿ 1996 ಪುಟ 122.
11. ಡಾ॥ಶಿವರಾಮ ಕಾರಂತ: ಮರಳಿ ಮಣ್ಣಿಗೆ, 2006 ಪುಟ 237–238.
12. ಡಾ॥ಐ.ಜೆ.ಮ್ಯಾಗೇರಿ: ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಪ್ರಥಮ ಮುದ್ರಣ 2008 ಪುಟ 147.
13. ಡಾ॥ ಕರೀಗೌಡ ಬೀಚನಹಳ್ಳಿ: ಸಂಕಥನ, ಎರಡನೇ ಮುದ್ರಣ 2010 ಪುಟ 158–159.
14. ಡಾ॥ಶಿವರಾಮ ಕಾರಂತ: ಮರಳಿ ಮಣ್ಣಿಗೆ.2006 ಪುಟ 403.
15. ಡಾ॥ಶಿವರಾಮ ಕಾರಂತ: ಮರಳಿ ಮಣ್ಣಿಗೆ.2006 ಪುಟ 406–407.

## ಸಮಾರೋಪ

ಒಟ್ಟಾರೆಯಾಗಿ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರುಹೆಗ್ಗಡಿತಿ' ಹಾಗೂ ಶಿವರಾಮ ಕಾರಂತರ 'ಮರಳಿಮಣ್ಣಿಗೆ' ಈ ಮೂರು ಕಾದಂಬರಿಗಳಲ್ಲಿ ನಾವು ಗಮನಿಸಬಹುದಾದ ಅಂಶವೆಂದರೆ ಪಾಶ್ಚಾತ್ಯರ ಸಂಸ್ಕೃತಿಯು ನಮ್ಮ ಭಾರತೀಯ ಸಂಸ್ಕೃತಿಗೆ ಬಂದು ಅಪ್ಪಳಿಸಿದಾಗ ಪರಿಣಾಮಗಳು ಉಂಟಾದವು. ಒಂದು ವಸಾಹತುಪ್ರಜ್ಞೆಯ ಆಗಮನದಿಂದ ನವನಾಗರೀಕತೆಯ ಕಡೆಗೆ ಮುನ್ನಡೆ ಸಾಧಿಸುವ ಸದಾವಕಾಶ ದೊರೆತು ಇದು ಆತ್ಮ ವಿಮರ್ಶೆಗೆ ನಾವು ಒಳಗಾಗುವಂತೆ ಮಾಡಿತು. ಸ್ಥಳೀಯತೆ ಮತ್ತು ನಮ್ಮ ಪರಂಪರೆಯ ಮೌಲ್ಯಗಳನ್ನು ನಾವು ಪುನರ್ ಪರಿಶೀಲನೆ ಮಾಡಲು ಸಾಧ್ಯವಾಯಿತು ಇದರ ಆವೇಗ ಉದ್ವೇಗಗಳಲ್ಲಿ ಎಷ್ಟೋ ಸಾರಿ ಪರಂಪರೆಯ ನಿರಾಕರಣೆಯೂ ಆಯಿತು.

ಈ ಪರಂಪರೆ ಮತ್ತು ವಸಾಹತು ಪ್ರಜ್ಞೆ ಇವುಗಳ ಮುಖಾ-ಮುಖಿ, ಅದು ಈಗಲೂ ಒಂದೊಂದು ನೆಲೆಯಲ್ಲಿ ನಡೆಯುತ್ತಲೇ ಇದೆ. ಹೊಸ ಅನ್ವೇಷಣೆಗೆ ದಾರಿ ಮಾಡಿಕೊಟ್ಟಿತು ಮಾತ್ರವಲ್ಲ ಕೊಡುತ್ತಲೇ ಇದೆ. ಹೀಗೆ ಇದನ್ನು ಈ ಕಾದಂಬರಿಗಳು ಅತ್ಯಂತ ಅರ್ಥ ಪೂರ್ಣವಾಗಿ ಧ್ವನಿಸುತ್ತದೆ.

+ಪರಾಮರ್ಶನ ಗ್ರಂಥಗಳು:


1. ಕುವೆಂಪು: ಕಾನೂರು ಹೆಗ್ಗಡತಿ, ಉದಯರವಿ ಪ್ರಕಾಶನ, ಮೈಸೂರು, 1997.
2. ಕುವೆಂಪು: ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, 1998.
3. ಡಾ॥ಕೆ.ಶಿವರಾಮಕಾರಂತರು: ಮರಳಿ ಮಣ್ಣಿಗೆ, ಎಸ್‌ಬಿಎಸ್ ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ಮರುಮುದ್ರಣ 2012.
4. ಡಾ॥ಐ.ಜೆ.ಮ್ಯಾಗೇರಿ: ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಪ್ರಥಮ ಮುದ್ರಣ 2008.
5. ಡಾ॥ ಸುರೇಶ್ ಪಾಟೀಲ: ಕನ್ನಡ ಕಾದಂಬರಿಗಳಲ್ಲಿ ರಾಜಕೀಯ ವಸ್ತುವಿನ್ಯಾಸ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, 2008.
6. ಡಾ॥ ಶಿವರಾಮ ಕಾರಂತರು : ಕಾದಂಬರಿಕಾರರಾಗಿ ಕಾರಂತರು ಪ್ರಸಾರಂಗ,ಬೆಂಗಳೂರು ವಿಶ್ವವಿದ್ಯಾನಿಲಯ.

7. ಡಾ॥ ಟಿ.ಪಿ.ಅಶೋಕ್: ಕಾರಂತ / ಕುವೆಂಪು

8. ಡಾ॥ರಾಜೇಂದ್ರ ಚೆನ್ನಿ: ದೇಶೀ ವಾದ ಸಾಹಿತ್ಯ ಪರಿಭಾಷಿಕ ಮಾಲೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ಎರಡನೇ ಮುದ್ರಣ 1999

9. ಡಾ॥ ಡಿ.ಆರ್. ನಾಗರಾಜ್: ಅಮೃತ ಮತ್ತು ಗರುಡ (ವಿಮರ್ಶಾ ಲೇಖನಗಳ ಸಂಕಲನ),ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು 1990

10.ಕುವೆಂಪು: ಮಲೆಗಳಲ್ಲಿ ಮದುಮಗಳು,ಉದಯರವಿ ಪ್ರಕಾಶನ,ಮೈಸೂರು 1998 .

11.ಡಾ॥ ಕೆ. ಸಿ. ಶಿವಾರೆಡ್ಡಿ: ಶತಮಾನದ ಹಾಡು–ಪಾಡು,ಅಧ್ಯಯನ ಮಂಡಲ, ಬೆಂಗಳೂರು. 2003

12. ಡಾ॥ ಕರೀಗೌಡ ಬೀಚನಹಳ್ಳಿ: ಸಂಕಥನ, ಎರಡನೇ ಮುದ್ರಣ 2010.

13. ಡಾ॥ ಕೀರ್ತಿನಾಥ ಕುರ್ತ ಕೋಟಿ: ಕಾದಂಬರಿ, ವಿಮರ್ಶೆಯ ವಿನಯ,ದ್ವಿತೀಯ ಆವೃತ್ತಿ 1996.

14. ಡಾ॥ಶಿವರಾಮ ಕಾರಂತ: ಮರಳಿ ಮಣ್ಣಿಗೆ,2006.

15. ಬಸವರಾಜ್ ಕಲ್ಗುಡಿ; ಅನುಭಾವಃ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, 2001

16. ಸಾಹಿತ್ಯ ವಿಮರ್ಶೆಯ ತತ್ವಗಳು (ಸಂ) ಪ್ರೊ. ಶೈಲಜ ಎಚ್.ಟಿ, ಕನ್ನಡ ಪುಸ್ತಕ ಪ್ರಾಧಿಕಾರ,ಬೆಂಗಳೂರು 2010

17. ಕುಮಾರ್ ಬುರಡಿಕಟ್ಟಿ ಎ. ನಿರಂಜನ, ; ಅನುವಾದ, ಆಚರಣೆ ಕುರಿತು ಹಾಗೂ

18. ಕನ್ನಡ ಸಂಶೋಧನೆಯ ವೈಧಾನಿಕತೆಗಳು (ಸಂ) ಡಾ. ಅಮರೇಶ ನುಗಡೋಣಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ 2008

19. ಓ. ಎಲ್. ನಾಗಭೂಷಣಸ್ವಾಮಿ ; ವಿಮರ್ಶೆಯ ಪರಿಭಾಷೆ ಅಂಕಿತ ಪುಸ್ತಕ, ಬೆಂಗಳೂರು 1998

20. ಡಾ. ಟಿ. ವೆಂಕಟೇಶಮೂರ್ತಿ ; ಯಾಜಮಾನ್ಯ ಸಂಕಥನ, ಅಧ್ಯಯನ ಮಂಡಲ ಬೆಂಗಳೂರು 2009

21. ಡಾ. ಸುರೇಶ ಪಾಟೀಲ: ಕಾದಂಬರಿ ಮೀಮಾಂಸೆ, ಬೆಂಗಳೂರು, 2011

